ಸಂಪುಟ 6

ಸಂಚಿಕೆ 4

# ಕನ್ನಡ ಅಧ್ಯಯನ

ಬಿಸಿಲು ಸಂಚಿಕೆ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ



## ಲೇಖಕರಿಗೆ ಸೂಚನೆಗಳು

೧. ಲೇಖನಗಳು ಕರ್ನಾಟಕ ಅಧ್ಯಯನಗಳಿಗೆ ಸಂಬಂಧಿಸಿರಬೇಕು ಅಥವಾ ಕರ್ನಾಟಕ ಅಧ್ಯಯನಗಳಿಗೆ ಹೊಸ ಆಯಾಮ ನೀಡಬಲ್ಲ ತಾತ್ವಿಕ ಚಿಂತನೆಗಳನ್ನು ಒಳಗೊಂಡಿರಬೇಕು.

೨. ಅನುವಾದಿತ ಲೇಖನವಾಗಿದ್ದಲ್ಲಿ ಸಂಬಂಧಪಟ್ಟವರ ಅನುಮತಿಯನ್ನು ಪಡೆದಿರಬೇಕು.

೩. ಲೇಖನಗಳನ್ನು ಹಾಳೆಯ ಒಮ್ಮಗ್ಗುಲಲ್ಲಿ ಅಂದವಾಗಿ ಬರೆದಿರಬೇಕು.

೪. 'ಲೇಖನಗಳು' ೫ ರಿಂದ ೧೦ ಪುಟಗಳ ಒಳಗೆ ಹಾಗೂ 'ಹೊಳಹು'ಗಳು ೧ ರಿಂದ ೨ ಪುಟಗಳ ಒಳಗೆ ಇರಬೇಕು.

೫. ಲೇಖನಗಳಲ್ಲಿ ಬರುವ ಉಲ್ಲೇಖಗಳಿಗೆ ಸಂಬಂಧಿಸಿದಂತೆ ಟಿಪ್ಪಣಿಗಳನ್ನು ನೀಡುವಾಗ, ಕೆಳಕಂಡ ಮಾದರಿ ಅನುಸರಿಸಿದರೆ ಒಳ್ಳೆಯದು. ಲೇಖನದ ಒಳಗೆ: ಲೇಖಕರ ಸಂಕ್ಷಿಪ್ತ ಹೆಸರು, ಕೃತಿವರ್ಷ, ಪುಟಸಂಖ್ಯೆ -ಈ ಕ್ರಮದಲ್ಲಿ. ಉದಾ: (ಚಿಮೂ: ೧೯೯೩:೫೪) ಲೇಖನದ ಕೊನೆಗೆ: ಲೇಖಕ, ವರ್ಷ, ಕೃತಿ, ಪ್ರಕಾಶನ, ಊರು -ಈ ಕ್ರಮದಲ್ಲಿ ಉದಾ: ಚಿದಾನಂದಮೂರ್ತಿ ಎಂ. (೧೯೯೩) ಹೊಸತು ಹೊಸತು, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

೬. ಲೇಖನಗಳ ಒಳಗಿನ ಅಭಿಪ್ರಾಯಗಳು ಆಯಾ ಲೇಖಕರವು. ವಿಶ್ವವಿದ್ಯಾಲಯದವಲ್ಲ.

೭. ಲೇಖನಗಳನ್ನು ಪತ್ರಿಕೆಯ ಆಶಯಕ್ಕೆ ಅನುಗುಣವಾಗಿ ಆಯ್ದು ಪ್ರಕಟಿಸಲಾಗುವುದು. ಅಪ್ರಕಟಿತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಆದ್ದರಿಂದ ಲೇಖಕರು ಲೇಖನದ ನಕಲನ್ನು ಇಟ್ಟುಕೊಳ್ಳುವುದು.

೮. ಲೇಖನಗಳನ್ನು ಕಳಿಸುವ ವಿಳಾಸ: ಸಂಪಾದಕ
'ಕನ್ನಡ ಅಧ್ಯಯನ' ಪತ್ರಿಕೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಚಂದಾ ವಿವರ : ವಾರ್ಷಿಕ ಚಂದಾ: ರೂ. ೫೦.೦೦
ಐದು ವರ್ಷಗಳಿಗೆ: ರೂ. ೨೦೦.೦೦

ಚಂದಾ ಕಳಿಸುವ ವಿಳಾಸ : ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

**ಚಂದಾದಾರರಿಗೆ ಸೂಚನೆ :** ಇದು ಸಂಪುಟ ೬ರ ಕೊನೆಯ ಸಂಚಿಕೆಯಾಗಿದೆ. ಚಂದಾ ಮುಗಿದಿರುವವರು ಸಂಪುಟ ೭ರ ಸಂಚಿಕೆಗಳಿಗೆ ಚಂದಾ ನವೀಕರಿಸಬೇಕೆಂದು ವಿನಂತಿ.

# ಕನ್ನಡ ಅಧ್ಯಯನ

## ಬಿಸಿಲು ಸಂಚಿಕೆ

ಸಂಪಾದಕ

**ರಹಮತ್ ತರೀಕೆರೆ**



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

KANNADA ADHYAYANA (Quartely) Vol. VI-4
Ed. by Dr. Rahamath Tarikere

Published by The Director, Prasaranga,
Kannada University, Hampi, Vidyaranya - 583 276

Pages : x + 112

ತ್ರೈಮಾಸಿಕ ಪತ್ರಿಕೆ, ಸಂಪುಟ ೬, ಸಂಚಿಕೆ ೪ (ಏಪ್ರಿಲ್, ಮೇ, ಜೂನ್ ೨೦೦೦)



ಸಲಹಾ ಸಂಪಾದಕರು : ಡಾ. ಎಂ.ಎಂ. ಕಲಬುರ್ಗಿ
ಪ್ರೊ. ಅಲ್ಲಮಪ್ರಭು ಬೆಟ್ಟದೂರ
ಡಾ. ಶಾಂತಿನಾಥ ದಿಬ್ಬದ
ಡಾ. ಕೆ.ವಿ. ನಾರಾಯಣ
ಪ್ರೊ. ಹನುಮಣ್ಣ ನಾಯಕ ದೊರೆ
ಪ್ರೊ. ಲಕ್ಷ್ಮಣ್ ತೆಲಗಾವಿ

ಸಹಾಯಕ ಸಂಪಾದಕರು : ಶಿವಾನಂದ ವಿರಕ್ತಮಠ
ಸುಜ್ಞಾನಮೂರ್ತಿ

ಬಿಡಿ ಪ್ರತಿ ಬೆಲೆ : ರೂ. ೧೫.೦೦
ವಾರ್ಷಿಕ ಚಂದಾ : ರೂ. ೫೦.೦೦
ಪಂಚವಾರ್ಷಿಕ ಚಂದಾ : ರೂ. ೨೦೦.೦೦

ಮುಖಪುಟ : ಕೆ.ಕೆ. ಮಕಾಳಿ

ಚಿತ್ರ : ಎಸ್. ಕೃಷ್ಣಪ್ಪ
ಕೃಪೆ : ಕರ್ನಾಟಕ ಕಲಾ ಅಕಾಡೆಮಿ, ಬೆಂಗಳೂರು

**ಪ್ರಕಾಶಕರು**
ಪ್ರೊ. ಎ.ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಡಿ.ಟಿ.ಪಿ.**
ಸಂಧ್ಯಾ ಕಂಪ್ಯೂಟರ್ ಗ್ರಾಫಿಕ್ಸ್, ಹೊಸಪೇಟೆ

**ಮುದ್ರಕರು**
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ

ಸೊಲ್ಲು

# ಸಂಶೋಧನೆಯಲ್ಲಿ ತಂತ್ರಗಾರಿಕೆಯ ಅಗತ್ಯವಿದೆಯೇ?

● ಸಂಪಾದಕ

'ಸತ್ಯ'ವನ್ನೇ ಹೇಳುವ ವ್ರತಸ್ವೀಕರಿಸಿದ ಒಬ್ಬ ಋಷಿಯ ಕತೆಯಿದೆ. ಒಮ್ಮೆ ಅವನು ತಪಸ್ಸಿಗೆ ಕುಳಿತಿದ್ದಾಗ ನಾಲ್ಕಾರು ದಾರಿಹೋಕರು ಓಡೋಡುತ್ತಾ ಗಾಬರಿಯಲ್ಲಿ ಬಂದು, 'ತಮ್ಮನ್ನು ದರೋಡೆಕೋರರು ಅಟ್ಟಿಸಿಕೊಂಡು ಬರುತ್ತಿದ್ದಾರೆ, ಇಲ್ಲೇ ಅಡಗಿಕೊಳ್ಳುತ್ತೇವೆ' ಎಂದು ಹೇಳಿ, ಅಲ್ಲೇ ಆಶ್ರಮದ ಮೂಲೆಯಲ್ಲಿ ಅವಿತುಕೊಳ್ಳುತ್ತಾರೆ. ಅಷ್ಟರಲ್ಲಿ ಹಿಂಬಾಲಿಸಿ ಕೊಂಡು ಬಂದ ದರೋಡೆಕೋರರು 'ಈಗ ಬಂದ ಪ್ರಯಾಣಿಕರು ಎಲ್ಲಿಹೋದರು' ಎಂದು ಋಷಿಗೆ ಕೇಳುತ್ತಾರೆ. ಋಷಿ ತನ್ನ ವ್ರತವನ್ನು ಉಳಿಸಿಕೊಳ್ಳಬೇಕಾದರೆ ಸುಳ್ಳು ಹೇಳುವಂತಿಲ್ಲ; ನಿಜ ಹೇಳಿದರೆ ದಾರಿಹೋಕರು ಕಷ್ಟಕ್ಕೀಡಾಗುತ್ತಾರೆ. ಅವನು ತನ್ನ ವ್ರತವನ್ನು ಉಳಿಸಿಕೊಳ್ಳಲು ನಿರ್ಧರಿಸಿ, ಜನ ಅಡಗಿದ ಜಾಗವನ್ನು ತೋರುತ್ತಾನೆ. ಅವನ ಕಣ್ಣೆದುರೇ ದರೋಡೆಕೋರರು ಜನರನ್ನು ಹೊರಗೆಳೆದು ಬಡಿಗೆಗಳಿಂದ ಬಡಿದು ಅವರಲ್ಲಿರುವುದನ್ನು ದೋಚಿಕೊಂಡು ಹೋಗುತ್ತಾರೆ. ಹೀಗೆ ಜನರನ್ನು ಬಲಿಕೊಟ್ಟು ಋಷಿಯ ಸತ್ಯ ಮೆರೆಯುತ್ತದೆ.

ನಮ್ಮಲ್ಲಿ ಸಂಶೋಧನೆಯ ಕೆಲಸ ಎಂದರೆ 'ಸತ್ಯ'ವನ್ನು ಶೋಧಿಸುವುದು ಎಂಬ ಒಂದು ಗ್ರಹಿಕೆಯಿದೆಯಷ್ಟೆ. ಸಮಸ್ಯೆಯೆಂದರೆ 'ಸಂಶೋಧನೆಯಲ್ಲಿ ಸಾರ್ವಕಾಲಿಕವಾದ ಆತ್ಯಂತಿಕವಾದ (absolute) ಒಂದು 'ಸತ್ಯ' ಎಂಬುದು ಇರುತ್ತದೆ.ಅದು ಸರ್ವಜನ ಸಮ್ಮತವಾಗಿರುತ್ತದೆ; ನಗ್ನವಾಗಿಯೂ ಕಹಿಯಾಗಿಯೂ ಇರುತ್ತದೆ. ಅದಕ್ಕೆ ಒಂದೇ ಮುಖವಿರುತ್ತದೆ' ಎಂಬ ನಂಬಿಕೆ ಪ್ರಚಲಿತವಾಗಿರುವುದು. ಅಧಿಕಾರಸ್ಥರು ಅಧಿಕಾರರಹಿತರೂ ಅಪಮಾನಿತ ಕೆಳಜಾತಿಗಳೂ ಬಡವರೂ ಅನೇಕ ಹಕ್ಕು ನಿರಾಕರಿಸಲ್ಪಟ್ಟ ಸ್ತ್ರೀಯರೂ ಇರುವ ಸಮಾಜವೊಂದರಲ್ಲಿ, ಸರ್ವಜನಸಮ್ಮತ ಸತ್ಯವೊಂದು ಇರಲು ಸಾಧ್ಯವಿಲ್ಲ. ಹೀಗಾಗಿ ಸತ್ಯ ಎಂಬ ಶಬ್ದವನ್ನು ಅದರಲ್ಲೂ ಸಮಾಜವಿಜ್ಞಾನದ ಸಂಶೋಧನೆಯಲ್ಲಿ ಯಾವಾಗಲೂ ಉದ್ಧರಣ ಚಿಹ್ನೆಯಲ್ಲಿಟ್ಟೇ ಬಳಸಬೇಕಾಗಿದೆ. ಅದು ಅಸಮಾನತೆ ಇರುವ ಯಾವಾಗಲೂ ನಿರಪೇಕ್ಷವಾದ ಹಾಗೂ ಬಹುಮುಖಿಯಾದ ಪರಿಕಲ್ಪನೆಯೇ.

ಸಂಶೋಧನೆಯಲ್ಲಿ ವಸ್ತುನಿಷ್ಠವಾದ ಸತ್ಯವೆಂಬುದೊಂದು ಇರಲು ಸಾಧ್ಯವೇ ಇಲ್ಲವೇ ಎಂಬ ತಾತ್ವಿಕವಾದ ಪ್ರಶ್ನೆಯನ್ನು ಸದ್ಯಕ್ಕೆ ಕೈಬಿಟ್ಟು, ಇದರ ಮುಂದುವರೆದ ಭಾಗವಾಗಿರುವ

ಇನ್ನೊಂದು ಗ್ರಹಿಕೆಯೊಂದನ್ನು ಮಾತ್ರ ಇಲ್ಲಿ ಚರ್ಚಿಸಬಹುದು. ಈ ಗ್ರಹಿಕೆಯು ಸಂಶೋಧನೆ ತಾನು ಕಂಡ 'ಸತ್ಯ'ವನ್ನು ಪ್ರಕಟಿಸುವ ವಿಧಾನವನ್ನು ಕುರಿತದ್ದು. ಸಂಶೋಧಕರ ಕೆಲಸವೆಂದರೆ, ತಾವು ಕಂಡುಹಿಡಿದ ಸತ್ಯವನ್ನು ಧೀರವಾಗಿ ನುಡಿಯುವುದು ಎಂಬ ಸರಳ ನಂಬಿಕೆ ಅಕೆಡಮಿಕ್ ವಲಯದಲ್ಲಿ ಇದ್ದಂತಿದೆ. ಹಾಗೆ ಧೀರವಾಗಿ ನುಡಿಯುವುದರಿಂದ ಆಗುವ ಸಾಮಾಜಿಕ ರಾಜಕೀಯ ಪರಿಣಾಮಗಳನ್ನು ಲೆಕ್ಕಿಸಬಾರದು ಎಂಬ ಉಗ್ರನಿಷ್ಠೆಯೂ ಇಲ್ಲಿ ಕೆಲಸ ಮಾಡುತ್ತಿರುತ್ತದೆ. ಈ ಧೀರತೆ-ಉಗ್ರನಿಷ್ಠೆಗಳಲ್ಲಿ ರಾಜಕೀಯ ಪ್ರಜ್ಞೆಯಿಲ್ಲದ ವಿಚಿತ್ರ ಮುಗ್ಧತನವೂ ಇರಬಹುದು; ಜಾಣತನದಿಂದ ಮುದುಗಿಸಿದ ರಾಜಕೀಯ ನಿಲುವುಗಳೂ ಕೆಲಸ ಮಾಡುತ್ತಿರಬಹುದು.

ಸಂಶೋಧನೆ ಎಂಬುದು ಜ್ಞಾನಪಡೆಯಲು ಮಾಡುವ ಒಂದು ಅಕೆಡಮಿಕ್ ಮಥನ ಮಾತ್ರವಾಗಿದ್ದರೆ, ಅಂದರೆ ಅದೊಂದು ರಾಜಕೀಯ ಆಶಯಗಳಿಲ್ಲದ ಕೇವಲ ಶುದ್ಧ ಜ್ಞಾನ ಸಾಧನೆ ಆಗಿದ್ದರೆ, ಇಷ್ಟೆಲ್ಲಾ ಸಂಕೀರ್ಣತೆ ಇರುತ್ತಿರಲಿಲ್ಲ. ಯಾವುದೇ ಸಮಾಜದಲ್ಲಿ, ಸಂಶೋಧನೆ ಎಂಬುದು ಕೂಡ ಭಿನ್ನಭಿನ್ನ ಐಡಿಯಾಲಜಿಗಳು ಸಮಾಜವನ್ನು ತಮಗೆ ಸರಿಕಂಡಂತೆ ಬದಲಿಸಲು ನಡೆಸುವ ಪ್ರಯತ್ನದ ಭಾಗವಾಗಿಯೇ ಇರುತ್ತದೆ. ಇದನ್ನೇ ಸೂಕ್ಷ್ಮಾರ್ಥದಲ್ಲಿ ಮತ್ತು ವಿಶಾಲ ನೆಲೆಯಲ್ಲಿ ರಾಜಕಾರಣ ಎಂದು ಕರೆಯಬಹುದು. ಈ ರಾಜಕಾರಣದ ಪಸೆಯಿಲ್ಲದ ಸಂಶೋಧನ ಚಟುವಟಿಕೆ ಎಂಬುದು ಇರಲು ಸಾಧ್ಯವೇ ಇಲ್ಲ. ಯಾವುದೇ ರಾಜಕೀಯ ಆಶಯಗಳು ಇಲ್ಲ ಎಂಬ ಮುಗ್ಧ ನಂಬಿಕೆ ಕೂಡ, ಇನ್ನೊಂದು ಒಂದು ರಾಜಕೀಯ ನಿಲುವೇ ಆಗಿರುತ್ತದೆ. ಉದಾಹರಣೆಗೆ, ನಾವು ಒಂದು ಸಮುದಾಯದ ಜೀವನ ಪದ್ಧತಿಯನ್ನು ನಿರ್ಲಿಪ್ತವಾಗಿ ದಾಖಲಿಸುತ್ತಿದ್ದೇವೆ ಎಂದಾಗಲೂ ಆ ಮೆಥಡಲಾಜಿ ಒಂದು ರಾಜಕೀಯ ಆಶಯಕ್ಕೆ ಒಳಗಾಗಿರುತ್ತದೆ. ಇದನ್ನು ಸಂಶೋಧನೆಯ 'ಶುದ್ಧಜ್ಞಾನವನ್ನು ಮಲಿನಗೊಳಿಸುವ ಕ್ರಿಯೆ' ಎಂದು ಕಳವಳ ಪಡಬೇಕಿಲ್ಲ. 'ಶುದ್ಧ' ಸಂಶೋಧನೆ ಎಂದು ನಾವು ಮಾಡುತ್ತಿರುವ ಅನೇಕ ಕೆಲಸಗಳು, ವಸಾಹತುಶಾಹಿ ಈ ನಾಡನ್ನು ರಾಜಕೀಯವಾಗಿ ಆಕ್ರಮಿಸಿಕೊಳ್ಳಲು ಹುಟ್ಟುಹಾಕಿದ ಅಧ್ಯಯನ ವಿಧಾನಗಳೇ ಆಗಿವೆ.

ಇದನ್ನು ಒಪ್ಪಿಕೊಂಡರೆ ಸಂಶೋಧನೆಯಲ್ಲಿ 'ಸತ್ಯ'ವನ್ನು ಪ್ರಕಟಿಸುವ ವಿಧಾನಗಳಲ್ಲಿ ಇರುವ 'ರಾಜಕಾರಣ'ವನ್ನು ಅರಿಯುವುದಕ್ಕೆ ಸುಲಭವಾಗುತ್ತದೆ. ಪ್ರಶ್ನೆ ಎಂದರೆ ಸಂಶೋಧನೆ ತಾನು ಭಾವಿಸಿದ ಸತ್ಯವನ್ನು ಹೇಳಬೇಕಾದಾಗ ಅದರ ಪರಿಣಾಮವು ಸಮಾಜದ ವಿವಿಧ ಶಕ್ತಿಗಳು ಹೇಗೆ ಉಪಯೋಗಿಸಿಕೊಳ್ಳುತ್ತವೆ ಎಂಬ ಖಬರನ್ನು ಬಹಳ ಸಲ ತೋರದಿರುವುದು. ತನ್ನ 'ಸತ್ಯ'ದ ಪರಿಣಾಮಗಳ ಬಗೆಗೆ ಜವಾಬ್ದಾರಿ ಹೊರದೆ, ಸತ್ಯವನ್ನು ಹೇಳುವುದು ಎಷ್ಟೇ ಪ್ರಾಮಾಣಿಕವಾಗಿದ್ದರೂ, ಅದನ್ನು ರಾಜಕೀಯ ಪ್ರಜ್ಞೆಯಿಲ್ಲದ ಹುಂಬತನ ಎಂದು ಕರೆಯಬೇಕಾಗುವುದು. ಯಾಕೆಂದರೆ ಹೇಳುವ ಸತ್ಯವು ಪರಿಸ್ಥಿತಿ ಬಿಗಡಾಯಿಸುವಂತಿದ್ದರೆ, ಶತ್ರುಗಳಿಗೆ ಬಲವನ್ನು ಕೊಡುವಂತಿದ್ದರೆ, ಅಂತಹ ಸಂದರ್ಭದಲ್ಲಿ ಸತ್ಯ ಹೇಳುವುದೇ ಒಂದು ಸಾಧನೆ ಅಲ್ಲ. ಅದರ ಪರಿಣಾಮವನ್ನು ನಿಭಾಯಿಸುವ ಹೊಣೆಗಾರಿಕೆ ಕೂಡ ಮುಖ್ಯವಾದ

ಸಂಗತಿಯಾಗಿರುತ್ತದೆ. ಇದನ್ನು ಸಂಶೋಧನೆಯ ಸಾಮಾಜಿಕ ಹೊಣೆಗಾರಿಕೆ ಎಂದು ಕರೆಯಬಹುದು. 'ಸಾಮಾಜಿಕ ಜವಾಬ್ದಾರಿ' ಎಂದರೆ ಆರೋಗ್ಯಕರವಾದ ಸಮಾಜ ಕಟ್ಟಲು ಬೇಕಾದ ಆಶಯಗಳನ್ನು ಪುಟಿಸುವುದು ಮಾತ್ರವಲ್ಲ. ಇದಕ್ಕೆ ವಿರುದ್ಧವಾಗಿ ಕ್ರಿಯಾಶೀಲವಾಗಿರುವ ಶಕ್ತಿಗಳಿಗೆ ಬಲವೊದಗಿಸದಂತೆ ನೋಡಿಕೊಳ್ಳುವ ಉಪಾಯವೂ ಆಗಿರುತ್ತದೆ. ಭಾರತದಂತಹ ದೇಶದಲ್ಲಿ ಸಂಶೋಧನೆ ಅನೇಕ ಸಲ ಇಂತಹ ಸಾಮಾಜಿಕ ಜವಾಬ್ದಾರಿಗಳನ್ನು ನಿಭಾಯಿಸಬೇಕಾಗುತ್ತದೆ.

ಅದರಲ್ಲೂ ಪುಸ್ತಕಗಳು ಹಾಗೂ ಲೇಖಕರು ಮೂಲಭೂತವಾದಿಗಳಿಂದ ಮತ್ತು ಸರಕಾರಗಳಿಂದ ನಿಷೇಧಕ್ಕೆ ಒಳಗಾದಾಗಲೆಲ್ಲಾ, ಇಂತಹ ವಿಚಿತ್ರಸ್ಥಿತಿ ಎದುರಾಗುವುದುಂಟು. ಆಗ ಸದರಿ ಲೇಖಕ ಅಥವಾ ಕೃತಿಯ ದುರ್ಬಲತೆಯನ್ನು ವಿಮರ್ಶಿಸುವ ಕೆಲಸವನ್ನು ಕೆಲವರು ಪ್ರಾಮಾಣಿಕವಾಗಿಯೇ ಮಾಡತೊಡಗುತ್ತಾರೆ. 'ಸತ್ಯ'ವನ್ನು ಹೇಳುವ ಈ ವಿಧಾನವು ಮುಗ್ಧವಾಗಿರಲಿ ಅಥವಾ ಉದ್ದೇಶ ಪೂರ್ವಕವಾಗಿರಲಿ, ಪರಿಣಾಮ ಮಾತ್ರ ಒಂದೇ ಆಗಿರುತ್ತದೆ. ಇದರಿಂದ ಕದಡಿದ ಪ್ರಕ್ಷುಬ್ಧತೆಯಲ್ಲಿ ಪರಿಸ್ಥಿತಿಯನ್ನು ಹಿಡಿತದಲ್ಲಿ ಇಟ್ಟುಕೊಂಡ ಬಲಶಾಲಿಗಳಿಗೆ ಅನುಕೂಲವಾಗಿರುವುದೇ ಹೆಚ್ಚು. (ವಿಧಾನದ ಮೇಲಿನ ಅತಿಎಚ್ಚರವು ನಿಷ್ಕ್ರಿಯತೆಗೆ ಒಯ್ಯಬಹುದು ಎಂಬುದನ್ನು ಮರೆಯದೆ ಕೂಡ ಈ ಮಾತನ್ನು ಹೇಳಬಹುದು.) ಕತೆಯಲ್ಲಿ ಹೇಳಿದ ಸತ್ಯವ್ರತ ಋಷಿಯ ಮುಗ್ಧತೆಯಿಂದಾಗಿದ್ದು ಇದೇ. ಹೀಗಾಗಿ 'ಸತ್ಯ'ವನ್ನು ಹೇಳುವುದು ಎಷ್ಟು ನೈತಿಕವಾಗಿ ಮಹತ್ವವೋ ಅದನ್ನು ಹೇಳುವ ವಿಧಾನ ಹಾಗೂ ಸಂದರ್ಭಗಳೂ ಅಷ್ಟೇ ಮುಖ್ಯವಾದವು. ತಮ್ಮ ಹೇಳುವಿಕೆಯ ಪರಿಣಾಮಗಳಿಗೆ ನೈತಿಕವಾಗಿ ಹೊಣೆಗಾರರಾಗುವುದು ಅಷ್ಟೇ ಅನಿವಾರ್ಯವಾದುದು.ಇದನ್ನು ಸಂಶೋಧನೆಯ ರಾಜಕೀಯ ಸೂಕ್ಷ್ಮತೆ ಎಂದು ಭಾವಿಸಬಹುದು.

ಹಾಗಾದರೆ ಬಲಶಾಲಿ ವ್ಯವಸ್ಥೆಯಿಂದ ಆಕ್ರಮಣಕ್ಕೆ ಒಳಗಾಗಿರುವ 'ದುರ್ಬಲ' ವ್ಯಕ್ತಿಗಳು ಯಾವಾಗಲೂ ನಿಷ್ಕಳಂಕವಾಗಿರುತ್ತಾರೆ ವಿಮರ್ಶಾತೀತರಾಗಿರುತ್ತಾರೆ ಎಂದಲ್ಲ. ಯಾಕೆಂದರೆ ಕೆಲವೊಮ್ಮೆ ಈ ಸಂಶೋಧಕರು-ಲೇಖಕರು ಅನಿಸಿಕೊಂಡವರು ತಮ್ಮ ಹೊಣೆಗೇಡಿತನದಿಂದ ಅಪಕ್ವತೆಯಿಂದ ಜನಪ್ರಿಯವಾಗುವ ಚಪಲಗಳಿಂದ ಕೂಡವ್ಯವಸ್ಥೆಯ ಅಧಿಕಾರಸ್ಥರನ್ನು ಅನಗತ್ಯವಾಗಿ ಕೆಣಕಿ ಎದುರು ಹಾಕಿಕೊಂಡಿರುವುದುಂಟು. ಹೀಗಾಗಿ ನಿಷೇಧಕ್ಕೆ ಒಳಗಾಗುವ ಲೇಖಕರನ್ನೆಲ್ಲ ಅಭಿವ್ಯಕ್ತಿ ಸ್ವಾತಂತ್ರ್ಯದ ಹೆಸರಿನಲ್ಲಿ ಸಮರ್ಥಿಸುವುದು ಮುಜುಗರದ ಕೆಲಸವಾಗಿರುತ್ತದೆ. ಆದರೂ ಈ ಅಪ್ರಿಯ ಕೆಲಸ ಅನಿವಾರ್ಯವಾಗಿರುತ್ತದೆ. ಯಾಕೆಂದರೆ ಯುದ್ಧಗ್ರಸ್ತ ಸ್ಥಿತಿಯಲ್ಲಿ ದುರ್ಬಲರ ಮೇಲೆ ಮಾಡುವ ವಿಮರ್ಶೆಯಿಂದ, ಯುದ್ಧ ಘೋಷಿಸಿದ ಬಲಶಾಲಿಗೇ ಲಾಭವಾಗಿದೆ ಎಂದು ಚರಿತ್ರೆ ಹೇಳುತ್ತದೆ. ಕನ್ನಡದಲ್ಲಿ ಯಾವುಯಾವುದೋ ಕಾರಣಕ್ಕೆ ಪುಸ್ತಕಗಳ ಮೇಲೆ ನಿಷೇಧ ಹೇರಲ್ಪಟ್ಟಾಗ, ಅವುಗಳ ದುರ್ಬಲತೆಯ ಮೇಲೆ ಕಟುವಾದ ಟೀಕೆಗಳನ್ನು ಕೆಲವರು ಪ್ರಾಮಾಣಿಕವಾಗಿಯೇ ಮತ್ತು ಸಕಾರಣವಾಗಿಯೇ ಮಾಡಿರುವುದುಂಟು. ಇದು ನಾಝಿಗಳ ಆಕ್ರಮಣದಲ್ಲಿ ಯಹೂದಿಗಳ ಬಗೆಗೆ ಸಕಾರಣವಾಗಿ

# ಪರಿವಿಡಿ


೧. ಸೊಲ್ಲು

ಸಂಶೋಧನೆಯ ಸಾಮಾಜಿಕ ಜವಾಬ್ದಾರಿಗಳು

**ಸಂಪಾದಕ**

೨. ಲೇಖನಗಳು

ಶಿಷ್ಟ ಕರ್ನಾಟಕದಿಂದ ಜನಪದ ಕರ್ನಾಟಕದ ಕಡೆಗೆ ೧

**ಹಿ.ಚಿ. ರಾಮಚಂದ್ರೇಗೌಡ**

ದೇಗಲೂರು: ಮಹಾರಾಷ್ಟ್ರದ ಒಂದು ಕನ್ನಡ ಸ್ಥಳನಾಮ ೧೧

**ಉಪಾಧ್ಯ ಜಿ.ಎಸ್.**

ತಿಂಥಿಣಿ ಮೌನೇಶ್ವರ ಗುಡಿ ಕಟ್ಟಿಸಿದವರು ಯಾರು? ೧೬

**ವೀರಣ್ಣ ದಂಡೆ**

'ಪಾಟ್ಟು': ಮಲಯಾಳ ಕಾವ್ಯಮೀಮಾಂಸೆಯ ಗುರುತು ೨೨

**ಮೋಹನ ಕುಂಟಾರ**

ಪಾರ್ವತಿಗುಡ್ಡರ ಸಂಪ್ರದಾಯ ೨೬

**ಕೇಶವನ್ ಪ್ರಸಾದ್**

೩. ಹಿಂದಣ ಹೆಜ್ಜೆ

ಶ್ರೀ ಚಾಮರಾಜೇಂದ್ರ ಒಡೆಯರವರ ರಾಜ್ಯಾಭಿಷೇಕೋತ್ಸವ ೩೪

**ಎಂ. ಶಿಂಗ್ರಯ್ಯ**

೪. ಕನ್ನಡಿ

ವೀರಶೈವ ಚಳುವಳಿಯ ಹುಟ್ಟು ೪೬

**ಮೂಲ: ಆರ್.ಎನ್. ನಂದಿ**

**ಅನು: ವಿಜಯಕುಮಾರ ಎಂ. ಬೋರಟ್ಟಿ**

೫. ಹೊಳಹು

'ಉಲಿಪಿ' ಎಂದರೇನು? ೬೭

ಎಸ್.ಎಸ್. ಅಂಗಡಿ

'ಕೊಡವ ಸಾಹಿತ್ಯ': ಒಂದು ಪ್ರತಿಕ್ರಿಯೆ ೬೮

ಬಾಲಸುಬ್ರಹ್ಮಣ್ಯ ಕಂಜರ್ಪಣೆ

೬. ಎಲಿಮರೆ

ಪ್ರೊ. ಕೆ.ಜಿ. ಕುಂದಣಗಾರ ೭೧

ಡಾ. ಎಂ.ಜಿ. ಬಿರಾದಾರ

ಡಾ. ಕೊಡವೂರು ಅನಂತರಾಮ ಭಟ್ಟರು ೭೫

ಮಾಧವ ಪೆರಾಜೆ

೭. ಮುಖಾಮುಖಿ

ಕಡಿದಾಳು ಶಾಮಣ್ಣ ಅವರೊಂದಿಗೆ ೭೭

ಸಂಪಾದಕ

೮. ಪರಿಚಯ

'ಎ ಕಂಪೇರೇಟಿವ್ ಗ್ರಾಮರ್ ಆಫ್ ದ ದ್ರವಿಡಿಯನ್ ಲಾಂಗವೇಜಸ್' ೯೮

ಮಾಧವ ಪೆರಾಜೆ

೯. ಆಕರಸೂಚಿ

ಕರ್ನಾಟಕ ಬುಡಕಟ್ಟು ಅಧ್ಯಯನ ೧೦೦

ಎಸ್. ಪ್ರಭಾಕರ

೧೦. ಈ ಸಂಚಿಕೆ ಲೇಖಕರು ೧೦೨

ಲೇಖನಗಳು

# ಶಿಷ್ಟ ಕರ್ನಾಟಕದಿಂದ ಜನಪದ ಕರ್ನಾಟಕದ ಕಡೆಗೆ

● ಹಿ.ಶಿ. ರಾಮಚಂದ್ರೇಗೌಡ

ಆಧುನಿಕತೆ ಅನನ್ಯತೆಯ ಅಗತ್ಯತೆಯನ್ನು ತೀವ್ರಗೊಳಿಸಿದೆ. ಮುಂದುವರಿದ ಹಾಗೂ ಹಿಂದುಳಿದ ಎರಡೂ ಬಗೆಯ ದೇಶಗಳು ತಮ್ಮ ಅಭಿವೃದ್ಧಿಯನ್ನು ಕಾಯ್ದಿರಿಸಿಕೊಳ್ಳಲು ಅನನ್ಯತೆಯ ಮೊರೆ ಹೋಗಿವೆ. ಮುಂದುವರಿದ ದೇಶಗಳಿಗೆ ತಮ್ಮ ಅಭಿವೃದ್ಧಿ ಪ್ರಮಾಣವನ್ನು ಯಥಾವತ್ತು ಉಳಿಸಿಕೊಳ್ಳುವುದು ಅಸ್ತಿತ್ವದ ಪ್ರಶ್ನೆಯಾಗಿದ್ದರೆ ಅಭಿವೃದ್ಧಿಶೀಲ ಹಾಗೂ ಹಿಂದುಳಿದ ದೇಶಗಳಿಗೆ ತಮ್ಮ ಅಭಿವೃದ್ಧಿಯನ್ನು ಮುಂದುವರಿಸುವ ಮತ್ತು ಅಭಿವೃದ್ಧಿ ರಾಷ್ಟ್ರಗಳ ತಾಂತ್ರಿಕ ಆಕ್ರಮಣವನ್ನು ತಡೆಗಟ್ಟುವ ಕಾರಣಕ್ಕೆ ಅನನ್ಯತೆಯ ಪ್ರಶ್ನೆ ಮುಖ್ಯವಾಗಿದೆ. ಈ ಅನನ್ಯತೆಯನ್ನು ಅವು ದೇಶ, ಭಾಷೆ, ಪ್ರದೇಶ, ಚರಿತ್ರೆ ಹಾಗೂ ಜಾನಪದದಂಥ ಮಾನದಂಡಗಳ ಮೂಲಕ ಎತ್ತಿ ಹಿಡಿಯುತ್ತಿವೆ. (Lauri Hanko 1988, pp 7 & 11 Traditon and cultural identity)

ಕರ್ನಾಟಕ ಒಂದು ಭಾಷಾಪ್ರದೇಶ ಹಾಗೂ ಚಾರಿತ್ರಿಕವಾಗಿ ಒಂದು ಸಾಂಸ್ಕೃತಿಕ ಘಟಕ. ಹತ್ತೊಂಬತ್ತನೆಯ ಶತಮಾನದಿಂದ ಈಚೆಗೆ ಈ ಸಾಂಸ್ಕೃತಿಕ ಘಟಕವನ್ನು ಜಾನಪದ ಅನನ್ಯತೆಯ ಮೂಲಕ ನಿರ್ವಹಿಸುವ ಚಾರಿತ್ರಿಕ ತುರ್ತೊಂದು ಉಂಟಾಯಿತು. ಆ ಚಾರಿತ್ರಿಕ ತುರ್ತಿನ ಹಿನ್ನೆಲೆಯನ್ನು ಈ ಲೇಖನ ಪ್ರಸ್ತಾಪಿಸುತ್ತದೆ.

ಕರ್ನಾಟಕ ಜಾನಪದ ಅಧ್ಯಯನ ಆರಂಭಗೊಂಡುದೆ ಕರ್ನಾಟಕದ ಅನನ್ಯತೆಯನ್ನು ಗುರುತಿಸುವ ಒಂದು ಮಾರ್ಗವಾಗಿ. ಈ ಅಧ್ಯಯನದ ಬೆಳವಣಿಗೆಯನ್ನು ನಾಲ್ಕು ಹಂತಗಳಲ್ಲಿ ಗುರುತಿಸಬಹುದು.

೧. ಪಾಶ್ಚಾತ್ಯ ಮಿಷನರಿಗಳು, ಸಿವಿಲ್ ಸರ್ವೆಂಟ್ಸ್ ಹಾಗೂ ಸಮಾಜಶಾಸ್ತ್ರಗಳ ವಿದ್ವಾಂಸರು ತಾವಿದ್ದ ಸಂಸ್ಥಾನಗಳ ಜನಪದವನ್ನು ಸಂಗ್ರಹಿಸುವ ಮೂಲಕ ಆ ಸಂಸ್ಥಾನಗಳ ಪ್ರತ್ಯೇಕ ಅನನ್ಯತೆಗೆ ಮಾರ್ಗದರ್ಶಿಗಳಾದಂತೆ ಕರ್ನಾಟಕಕ್ಕೂ ಮಾರ್ಗದರ್ಶಿಗಳಾದರು.

೨. ಬ್ರಿಟಿಷ್ ವಸಾಹತುಶಾಹಿ ವಿರುದ್ಧ ಹೋರಾಡುತ್ತ ಸ್ಥಳೀಯ ಭಾಷೆ, ಸಂಸ್ಕೃತಿ ಹಾಗೂ ದೇಶಾಭಿಮಾನಿಗಳು ಕರ್ನಾಟಕ ಸಂಸ್ಥಾನದ ಜನಪದ-ಜಾನಪದ ಅನನ್ಯತೆಯನ್ನು ಎತ್ತಿ ಹಿಡಿದರು.

೫. ಸ್ವಾತಂತ್ರ್ಯಾನಂತರ ಒಂದು ಭಾಷಾ ಸಂಸ್ಥಾನದ ನೆಲ, ಜಲ, ಸಂಸ್ಕೃತಿ ಹಾಗೂ ರಾಜಕೀಯ ಅಸ್ತಿತ್ವ ಪ್ರತಿಪಾದನೆಯ ಮೂಲಕ ಕರ್ನಾಟಕದ ಅನನ್ಯತೆಯನ್ನು ಪ್ರತಿಪಾದಿಸಲಾಯಿತು.

೬. ಈಗ ನವವಸಾಹತುಶಾಹಿ ಜಾಗತೀಕರಣದ ಮೂಲಕ ಒಡ್ಡುತ್ತಿರುವ ಪ್ರತಿಬಂಧಗಳನ್ನು ನಿರಾಕರಿಸುವ ದೆಸೆಯಲ್ಲಿ ಸ್ವದೇಶಿ ಎಂಬ ಪರಿಕಲ್ಪನೆಯ ಮೂಲಕ ಸ್ವತಂತ್ರ ಕರ್ನಾಟಕದ ಅನನ್ಯತೆಯನ್ನು ಒತ್ತಿ ಹೇಳಲಾಗುತ್ತಿದೆ.

ಪಾಶ್ಚಾತ್ಯ ಮಿಷನರಿಗಳು, ಸಿವಿಲ್ ಸರ್ವೆಂಟ್ಸ್ ಹಾಗೂ ಸಮಾಜ ವಿಜ್ಞಾನಗಳ ವಿದ್ವಾಂಸರು ಭಾರತದ ಇತರ ಸಂಸ್ಥಾನಗಳಲ್ಲಿ ಎಂಬಂತೆ ಕರ್ನಾಟಕದಲ್ಲೂ ಜಾನಪದ ಸಂಗ್ರಹಕ್ಕೆ ಕೈ ಹಚ್ಚಿದರು. ತಮ್ಮ ಸಾಂಸ್ಕೃತಿಕ ಯಜಮಾನಿಕೆ ಹಾಗೂ ಉಪದೇಶಗಳ ಉದ್ಧಾರಕ ಮನೋಧರ್ಮದಿಂದ ಅವರು ಜಾನಪದ ಕ್ಷೇತ್ರವನ್ನು ಪ್ರವೇಶಿಸಿದರು. ಮತಾಂತರದ ಉದ್ದೇಶಕ್ಕೆ ಮೊದಲು ಅವರು ಕರ್ನಾಟಕದ ಸಾಮಾನ್ಯ ಜನರನ್ನು ತಿಳಿಯುವ ಪ್ರಯತ್ನ ಮಾಡಿದರು. ಆ ಮೂಲಕ ಕರ್ನಾಟಕದಲ್ಲಿ ಕಂಡುಬರುವ ಜಾನಪದ ವಿಶೇಷ ಅಂಶಗಳನ್ನು ಗುರುತಿಸಿದರು. ಕನ್ನಡದ ಇಂಗ್ಲಿಶ್ ನಿಘಂಟು ರಚಿಸಿದ ರೆವರೆಂಡ್ ಕಿಟೆಲ್ ಯಾವ ಮತಾಂತರ ಕೆಲಸಕ್ಕೂ ಕೈ ಹಚ್ಚಲಿಲ್ಲ. ಅವನ ಕನ್ನಡ ಭಾಷಾ ಅಧ್ಯಯನ ಏಕಕಾಲದಲ್ಲಿ ಜಾನಪದ ಅಧ್ಯಯನವೂ ಆಗಿತ್ತು. ತನ್ನ ನಿಘಂಟುವಿನಲ್ಲಿ ಕನ್ನಡ ಪದಗಳ ಅರ್ಥವನ್ನು ಗಾದೆಗಳ ನೆರವಿನಿಂದ ವಿವರಿಸಿದ್ದಾನೆ. ಆ ಅಧ್ಯಯನ ಕನ್ನಡ ಗಾದೆಗಳ ಸಾಂದರ್ಭಿಕ ಅಧ್ಯಯನ(Contextual study) ಇದ್ದ ಹಾಗೆ ಇದೆ.

ಆ ಕಾಲದ ಸಮಾಜವಿಜ್ಞಾನಿಗಳು ಭಾಷೆ. ಸಂಸ್ಕೃತಿ. ಕಲೆ ಇತ್ಯಾದಿ ವಿಷಯಗಳ ಬಗ್ಗೆ ಅಧ್ಯಯನ ಮಾಡುವಾಗ ಜನಪದ ಭಾಷೆ. ಕಲೆ ಹಾಗೂ ಸಂಸ್ಕೃತಿ ಅಂಶಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಿದ್ದಾರೆ. ಆ ಮೂಲಕ ಕರ್ನಾಟಕವೊಂದು ಚಾರಿತ್ರಿಕವಾಗಿ ನೆಲೆ ನಿಂತ ಜನಪದ ಎಂಬ ಅಂಶವನ್ನು ಸ್ಪಷ್ಟಪಡಿಸಿದಂತೆ ಆಗಿದೆ. ಜವಹರಲಾಲ್ ಹಂಡೂ ಅವರು ಅಭಿಪ್ರಾಯ ಪಡುವಂತೆ "Most of these writings were published and form now a part of the great treasures of folklore we possess about our own past. looked from this viewpoint. these works of missionaries are of great historical value to a student of Indian folklore (p 135. Folklore An introduction 1989)

ಜಾನಪದ ಸಂಗ್ರಹವನ್ನು ಕೈಗೆತ್ತಿಕೊಂಡ ಸ್ಥಳೀಯರಲ್ಲಿ ಕನ್ನಡ ಸಾಹಿತಿಗಳು ಪ್ರಮುಖರು. ಇವರೆಲ್ಲ ಭಾರತ ರಾಷ್ಟ್ರೀಯ ಆಂದೋಲನದಲ್ಲಿ ಒಂದಿಲ್ಲೊಂದು ರೀತಿಯಲ್ಲಿ ತೊಡಗಿಕೊಂಡವರು. ಒಂದು ಸಂಸ್ಕೃತಿಯ ರಾಷ್ಟ್ರ, ಸಂಸ್ಕೃತಿ ಎಂದು ತಿಳಿದಿದ್ದ ಅವರು ಅದನ್ನು ಸಶಕ್ತಗೊಳಿಸಲು ಹಾಗು ವಸಾಹತುಶಾಹಿ ಸಂಸ್ಕೃತಿಗೆ ಎದುರು ನಿಲ್ಲಿಸಲು ಜನಪದ ಸಾಹಿತ್ಯದ ನೆರವನ್ನು ಪಡೆಯಲು ಬಯಸಿದರು. ಹಂಡೂ ಅವರು ಅಭಿಪ್ರಾಯ ಪಡುವಂತೆ "India was suddenly awaking from centuries of slumber. She had to sweep away the incrustations of English culture to find her own

roots and identity and folklore was a great extent instrumental in stimulating the spirit of nationalism, both before and after the independence was achieved". ..In the first place, native scholars, inspired by the nationalistic movement, for the first time valued their oral traditions and began collecting and studying them. Folks no longer remianed the exclusive domain of the long robed christian missionary or the white collared foreign bureaucrate. Indian scholars, felt that nationalism in India could not be made recognizable only by the deep collective emotions hidden in the hearts of deprived masses; on the other hand it had to be made manifest in the national languages, national epics, food, dress, ancient thought and wisdom, value system, folklore and literature(p 13-39)

ಕರ್ನಾಟಕದಲ್ಲಿ ಸಾಹಿತಿಗಳಿಗೆ ನೇರ ಹಾಗೂ ಹತ್ತಿರದಲ್ಲಿ ಸಿಕ್ಕ ಜನಪದವೆಂದರೆ ಸಂಸ್ಥಾನ ಜನಪದ ಮತ್ತು ಅದರ ಜನಪದ ಭಾಷೆ, ಆದ್ದರಿಂದಲೆ ಮೊದಲಿಗೆ ಇವರು ಭಾಷಿಕ ಹಾಗೂ ಸಾಹಿತ್ಯಕ ಜನಪದವನ್ನು ಸಂಗ್ರಹಿಸಿದರು. ಚಿಕ್ಕ ಹಾಗೂ ಸ್ಥಳೀಯ ಜನಪದಗಳ ಕಡೆಗೆ ಅವರ ಗಮನ ಹರಿಯಲಿಲ್ಲ.

ಕನ್ನಡ ಸಾಹಿತಿಗಳು ಕನ್ನಡ ಭಾಷೆ ಹಾಗೂ ಪರಂಪರೆಯ ಮೂಲಕ ಕರ್ನಾಟಕದ ಅನನ್ಯತೆಯನ್ನು ಸಾಧಿಸಿ ತೋರಿಸಲು ಹೊರಟರು. ಕನ್ನಡದ ಮೊದಲ ಕಾವ್ಯಲಕ್ಷಣ ಗ್ರಂಥ 'ಕವಿರಾಜಮಾರ್ಗ'ದಿಂದ ಉಲ್ಲೇಖಗಳನ್ನು ಎತ್ತಿದರು. ಇದರಲ್ಲಿ ಕನ್ನಡ ನಾಡನ್ನು ಭೌಗೋಳಿಕವಾಗಿಯೂ, ಭಾಷಿಕವಾಗಿಯೂ ಮತ್ತು ಜಾನಪದೀಯವಾಗಿಯೂ ಗುರುತಿಸುವ ಉಲ್ಲೇಖಗಳಿವೆ.

೧. ಕನ್ನಡನಾಡು ಕಾವೇರಿಯಿಂದ ಗೋದಾವರಿವರೆಗೆ ಹಬ್ಬಿತ್ತು(ಈಗ ಗೋದಾವರಿ ನದಿಯ ಪ್ರದೇಶ ಮಹಾರಾಷ್ಟ್ರದಲ್ಲಿದ್ದರೂ ಕನ್ನಡಾಭಿಮಾನಿಗಳು ತಮ್ಮ ಸಂಸ್ಥಾನವನ್ನು ಹಿಂದಿನಂತೆಯೆ ಕಲ್ಪಿಸಿಕೊಂಡು ಮಾತನಾಡುತ್ತಾರೆ.)

೨. 'ಕನ್ನಡವೆಂಬ ಜನಪದ'(ಕನ್ನಡ ಭಾಷೆಯನ್ನು ಆಡುವ ಜನವರ್ಗ ಇದೆ ಎಂಬ ಅಭಿಪ್ರಾಯ).

೩. ಕನ್ನಡಿಗರು ಅಕ್ಷರಾಭ್ಯಾಸ ಮಾಡದೆಯೂ ಕಾವ್ಯ ಬರೆಯಬಲ್ಲರು (ಇದು ಜನಪದ ಕಾವ್ಯ ಪ್ರಕಾರಗಳು ಇದ್ದ ಬಗ್ಗೆ ಉಲ್ಲೇಖ ಎಂದು ಹೇಳಲಾಗುತ್ತದೆ).

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಹಿರಿಯ ಸಾಹಿತಿಗಳು ಹಳಗನ್ನಡ ಸಾಹಿತ್ಯ ಸೃಷ್ಟಿ ಮಾದರಿಗಳಿಂದ ಹೊಸ ಸಾಹಿತ್ಯ ಸೃಷ್ಟಿ ಮಾದರಿಗಳಿಗೆ ಹೊರಳಬಯಸಿದರು. ಆಗ ಅವರಿಗೆ 'ಶಿಷ್ಟ ಕರ್ನಾಟಕ'ಕ್ಕಿಂತ 'ಜನಪದ ಕರ್ನಾಟಕ' ಅತ್ಯಂತ ಅಪೇಕ್ಷಣೀಯವಾಗಿ ಕಂಡಿತು. ಇಡಿ ಹಳೆಯ ತಲೆಮಾರಿನ ಕಾವ್ಯಚಿಂತನೆಯನ್ನು ಕೆಡವಿ ಹಾಕುವಂತೆ ಆ ಕಾಲದ ಸಾಹಿತ್ಯ ಪ್ರಸ್ಥಾನದ ನೇತಾರರಲ್ಲಿ ಒಬ್ಬರಾದ ಬಿ.ಎಂ. ಶ್ರೀಯವರು ಜನಪದ ಅಭಿವ್ಯಕ್ತಿಯ ಮಹತ್ವವನ್ನು ಕುರಿತು" ಮೊದಲು ಹುಟ್ಟಿದುದು ಜನವಾಣಿ, ಅದು ಬೆಳೆದು ಪರಿಷ್ಕೃತವಾಗಿ

ವೃದ್ಧಿಯಾದುದು ಕವಿವಾಗ್. ಜನವಾಗ್ ಬೇರು ಕವಿವಾಗ್ ಹೂವು" ಎಂದರು. ಕನ್ನಡದ ಶ್ರೇಷ್ಠ ಕವಿಗಳಲ್ಲಿ ಒಬ್ಬರಾದ ದ.ರಾ. ಬೇಂದ್ರೆಯವರು "ಹಾಗೆ ವಿಚಾರಿಸಿ ನೋಡಿದರೆ ಅವರದೇ (ಅಮ್ಮ ಅಕ್ಕಂದಿರು, ಮುದಿ ಮಕ್ಕಳು) ನಿಜವಾದ ಕಾವ್ಯ". "ನಮ್ಮ ಈಗಿನ ಕನ್ನಡ ಸಾಹಿತ್ಯಕ್ಕೆ ಆ ಸಂಸ್ಕಾರವು ಅವಶ್ಯವಿದೆ" (ಗರತಿಯ ಹಾಡು ಪು. ೧೮, ೧೯೩೧) ಎನ್ನುವ ಮೂಲಕ ಜನಪದಪರಂಪರೆಯ ಗುರುತ್ವವನ್ನು ಹೆಚ್ಚಿಸಿದರು. ಕರ್ನಾಟಕದ ಸಂಸ್ಕೃತಿಯ ಬಗ್ಗೆ ಆ ಕಾಲದಲ್ಲಿ ಅಧಿಕೃತವಾಗಿ ಮಾತನಾಡಬಲ್ಲವರಲ್ಲಿ ಒಬ್ಬರಾಗಿದ್ದ ಮಾಸ್ತಿ ವೆಂಕಟೇಶ ಅಯ್ಯಂಗಾರರು "ಕರ್ನಾಟಕದ ಜನರಲ್ಲಿ ಈ ನಾಡಿನ ಇತಿಹಾಸದಿಂದಲ್ಲ ವಾಸಿತವಾಗಿರುವ ಸಂಸ್ಕೃತಿಯೊಂದು ಉಂಟಾಗಿದೆ" ಎಂದು ಕನ್ನಡ ನಾಡನ್ನು ಜನಪರವಾದ ನೆಲೆಯಿಂದ ಗುರುತಿಸುತ್ತಾರೆ. ಜನಪದ ಸಾಹಿತ್ಯದ ವಿಶಿಷ್ಟತೆಯನ್ನು ಹೇಳಲು "ವಿದ್ಯಾವಂತರೆನ್ನುವ ನಾವು ಈ ಕವಿತೆಗೆ ಬಹು ವೇಳೆ ಬಲ್ಲವರು ಅಲ್ಲ. ಸಹೃದಯರು ಅಲ್ಲ" ಎಂದು ಶಿಷ್ಟ ಸಾಹಿತ್ಯದ ಯಜಮಾನಿಕೆಯನ್ನು ದೂರ ಇರಿಸುತ್ತಾರೆ. ಆ ಮೂಲಕ ಜನಪದ ಕರ್ನಾಟಕದ ಅನನ್ಯತೆಯನ್ನು ಗುರುತಿಸುತ್ತದೆ.

ಇಡಿ ಕರ್ನಾಟಕದಾದ್ಯಂತ ಜನಪದ ಸಾಹಿತ್ಯ, ಸಂಸ್ಕೃತಿ ಹಾಗೂ ಜೀವನ ವಿಧಾನವನ್ನು ಎತ್ತರಿಸಿ ಮಾತನಾಡಿದ ಬೆಟಗೇರಿ ಕೃಷ್ಣಶರ್ಮರು "ಕನ್ನಡಿಗರು ತಮ್ಮ ಭಾಷಾ-ಪ್ರದೇಶ ವಿಸ್ತಾರವನ್ನು ಕಳೆದುಕೊಂಡಿರುವರೆ ಹೊರತು, ಸಾಂಸ್ಕೃತಿಕ ಜನಪದವನ್ನು ಕಳೆದುಕೊಂಡಿಲ್ಲ" (ಪು. ೭, ೧೯೭೩ ಅಧ್ಯಕ್ಷ ಭಾಷಣ, ಮೂರನೆಯ ಕರ್ನಾಟಕ ಜಾನಪದ ಸಮ್ಮೇಳನ, ನಾಗಮಂಗಲ) ಎನ್ನುತ್ತಾರೆ. ಜನಪದ ಕರ್ನಾಟಕದ ಗ್ರಹಿಕೆಗೆ ಭಾರತೀಯ ಶಿಷ್ಟವನ್ನು ಪಕ್ಕಕ್ಕೆ ಸರಿಸುವುದು ಮಾತ್ರವಲ್ಲ; ಪರದೇಶಿ ಶಿಷ್ಟವನ್ನು ತಳ್ಳಿಹಾಕುವ ಮಾತನ್ನು ಜನಪದ ಸಂಸ್ಕೃತಿಯ ವಕ್ತಾರರಲ್ಲಿ ಒಬ್ಬರಾದ ಅರ್ಚಕ ರಂಗಸ್ವಾಮಿಯವರು ಹೇಳುತ್ತಾರೆ: "ನಾವು ಇಂಗ್ಲಿಷ್ ಸಾಹಿತ್ಯವನ್ನು ನಮ್ಮ ಮಾತೃಭಾಷೆಯನ್ನಾಗಿ ಮಾಡಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ನಮ್ಮದರಲ್ಲಿ ಮುರಿದ ಭಾಗವನ್ನು ಸರಿಪಡಿಸಬೇಕು. ಹಳ್ಳಿಯ ಪಾಮರ ಸಾಹಿತ್ಯವೂ ಬೆಳೆಯಲಿ. ಇದೂ ಚರಿತ್ರೆಯ ಭಾಗ, ಯಾವುದು ಕನ್ನಡ ನಾಡಿಗೆ ಶ್ರೇಯಸ್ಸೋ ಅದನ್ನು ಅನುಸರಿಸಿ" (ix-xiii ಹಳ್ಳಿಯ ಹಾಡು) ಎಂಬುದು ಅವರ ನಿಲುವು.

೧೯೬೬ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಕುಲಪತಿಯಾಗಿದ್ದ ದೇ. ಜವರೇಗೌಡರು ಕನ್ನಡ ಎಂ.ಎ.ಗೆ ಎರಡು ಜಾನಪದ ಸಂಬಂಧಿ ಪತ್ರಿಕೆಗಳನ್ನು ಸೇರಿಸಿದರು. ಜಾನಪದ ಡಿಪ್ಲೊಮಾ ಕೋರ್ಸನ್ನು ತೆರೆದರು. ೧೯೭೪ರಲ್ಲಿ ಸ್ವತಂತ್ರ ಜಾನಪದ ಎಂ.ಎ. ಕೋರ್ಸನ್ನು ಪ್ರಾರಂಭಿಸಿದರು. ಅವರು ಭಾರತೀಯತ್ವದ ಅಥವ ದೇಶೀಯತೆಯ ರಕ್ಷಣೆಗಾಗಿ ಜನಪದ ಜೀರ್ಣೋದ್ಧಾರ ಕಾರ್ಯ ನಡೆಯಬೇಕಾಗಿದೆ" (v. ಜನಪದ ಸಾಹಿತ್ಯ ಸಮೀಕ್ಷೆ ೧೯೬೬) ಎಂದು ಹೇಳುವ ಮೂಲಕ ಭಾರತ ಹಾಗೂ ಕರ್ನಾಟಕವೆಂಬ ಎರಡು ದೇಶೀಯತೆಗಳನ್ನು ಗುರುತಿಸುವಂತಿದೆ. ದಕ್ಷಿಣ ಏಷ್ಯಾದಲ್ಲೇ ದೊಡ್ಡದೆನ್ನುವ ಜಾನಪದ ವಸ್ತು ಸಂಗ್ರಹಾಲಯವನ್ನು ಇವರು ಸ್ಥಾಪಿಸಿದರು.

ಸೂಕ್ಷ್ಮವಾಗಿ ಗಮನಿಸಿದರೆ ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಉಂಟಾದ ಶೂದ್ರ ಚಳುವಳಿಯ ಛಾಯೆ ಜವರೇಗೌಡರ ನಂತರದ ಜಾನಪದ ಸಂಗ್ರಹಕಾರರಲ್ಲಿ ಕಾಣುತ್ತದೆ. ಶಿಷ್ಟ ಪುರಾಣ ಹಾಗೂ ಶಾಸ್ತ್ರ ಜಗತ್ತು ಮೇಲುಜಾತಿಯವರ ಜ್ಞಾನ, ಮಧ್ಯಮಜಾತಿಗಳ ಅಸ್ತಿತ್ವ ಜನಪದ ಪುರಾಣ, ಕತೆ, ಕಾವ್ಯ..ಗಳ ಮೂಲಕವೇ ಆಗಬೇಕೆಂಬ ಧೋರಣೆ ಈ ಘಟ್ಟದಲ್ಲಿ ಕಾಣುತ್ತಿದೆ. (ಕೆಳವರ್ಗಗಳ ಜನಪದ ಹಾಗೂ ಜಾನಪದ ಅಧ್ಯಯನ ಈ ಕಾಲಘಟ್ಟ ದಲ್ಲಿ ದೂರವೇ ಉಳಿದಿದೆ.) ಜಾನಪದ ಒಂದು ದೊಡ್ಡ ಸಂಪತ್ತು, ಆಧುನಿಕತೆಯ ಪ್ರಭಾವ ದಿಂದ ಹಳ್ಳಿಗಳು ಒಡೆಯುತ್ತಿವೆ, ಅದ್ದರಿಂದ ಜಾನಪದವೂ ನಶಿಸುತ್ತಿದೆ ಎಂದು ಇವರು ಹಳಹಳಿಸುತ್ತಾರೆ. ಆ ಮೂಲಕ ಶೂದ್ರರ ಸಮಕಾಲೀನ ಸಾಂಸ್ಕೃತಿಕ ರಾಜಕೀಯದ ಅಸ್ತಿತ್ವಕ್ಕಾಗಿ ಪ್ರಯತ್ನಿಸಿದ್ದಾರೆ. ಬಿ.ಎಂ.ಶ್ರೀ.,ದ.ರಾ.ಬೇಂದ್ರೆ, ಮಾಸ್ತಿ, ಬೆಟಗೇರಿ ಕೃಷ್ಣಶರ್ಮ ಅವರಂಥ ಬ್ರಾಹ್ಮಣವರ್ಗದ ವಿದ್ವಾಂಸರು ನಾಡಿಗೆ ಕೊರತೆಯಾಗಿರುವ ಜ್ಞಾನವನ್ನು ಜಾನಪದ ಸಂಗ್ರಹ ಹಾಗೂ ಅಧ್ಯಯನದ ಮೂಲಕ ತುಂಬಿಕೊಳ್ಳಲು ಪ್ರಯತ್ನಿಸಿದರೆ ಶೂದ್ರ ವಿದ್ವಾಂಸರು ಜಾನಪದವನ್ನು ತಮ್ಮ ಹೊಸ ಅಸ್ತಿತ್ವದ ನೆಲೆಯನ್ನು ಸೃಷ್ಟಿಸಿಕೊಳ್ಳಲು ಬಳಸಿಕೊಂಡಂತೆ ಕಾಣುತ್ತದೆ.

೧೯೮೦ರ ನಂತರ ಕರ್ನಾಟಕ ಜಾನಪದ ಅಧ್ಯಯನ ಕರ್ನಾಟಕವನ್ನು ಬೇರೆ ಬೇರೆ ನೆಲೆಗಳಿಂದ ಗುರುತಿಸಲು ಪ್ರಯತ್ನಿಸಿದೆ. ಅಂಥ ಅಧ್ಯಯನದ ನೆಲೆಗಳನ್ನು ಕೆಳಗಿನಂತೆ ಗುರುತಿಸಬಹುದು.

೧. ಜನಪದ ಸಾಮಗ್ರಿ ಸಂಗ್ರಹವನ್ನೆ ಜಾನಪದ ಅಧ್ಯಯನ ಎಂದು ತಿಳಿದ ನೆಲೆ
೨. ಜನಪದ ಸಾಮಗ್ರಿ ನಮ್ಮ ಪೂರ್ವಿಕರ ಕೊಡುಗೆ ಹಾಗೂ ನಮ್ಮ ಸಂಪತ್ತು ಎಂದು ಗ್ರಹಿಸಿದ್ದು
೩. ಜಾನಪದ ಒಂದು ಅಕೆಡೆಮಿಕ್ ಅಧ್ಯಯನ ಶಿಸ್ತು ಮಾತ್ರ, ಜನರ ಜೀವನದ ಜೊತೆಗೆ ತಳುಕು ಹಾಕಬಾರದು ಎಂಬ ನಿಲುವು. ಇದು ಪೂರಾ ಪಾಶ್ಚಾತ್ಯ ಧೋರಣೆಯಿಂದ ಪ್ರೇರಿತವಾದುದು.
೪. ಜಾನಪದವನ್ನು (lore)'ಸಾಮಗ್ರಿ' ನೆಲೆಗಿಂತ "ಜಾನಪದ'(Folk)ನೆಲೆಯಲ್ಲಿ ಅಧ್ಯಯನ ಮಾಡುವುದು ಸರಿ ಎಂಬ ನಿಲುವು.
೫. ಪಾಶ್ಚಾತ್ಯ ಅಧ್ಯಯನ ಮಾದರಿಗಳಿಂದ ಹೊರಗೆ ಬಂದು ದೇಶೀ ನೆಲೆಯಲ್ಲಿ ಜಾನಪದವನ್ನು ಅಧ್ಯಯನ ಮಾಡಬೇಕೆಂಬ ನಿಲುವು.
೬. ಕರ್ನಾಟಕ ಜಾನಪದವನ್ನು ಒಂದು ಜ್ಞಾನ ಮಾದರಿ ಎಂದು ತಿಳಿದು ಅದನ್ನು ಜಾಗತಿಕವೆಂಬ ಜ್ಞಾನ ಮಾದರಿಗೆ ಸಮನಾಗಿ ಬೆಳಸಬೇಕೆಂಬ ನಿಲುವು.

ಜಾನಪದ ದೊಡ್ಡ ಸಂಪತ್ತು. ಅದನ್ನು ಸಂಗ್ರಹಿಸಿ ಮತ್ತು ವಿವರಿಸಿಕೊಂಡು ಇಟ್ಟುಕೊಳ್ಳಬೇಕು ಎಂಬ ಧೋರಣೆಯ ಮೂಲಕವಾಗಿ ಮೊದಲೆರಡು ನಿಲುವುಗಳು ಹುಟ್ಟಿಕೊಂಡಿವೆ. ಈ ಪರಿಕಲ್ಪನೆಯ ಹಿಂದೆ ಮಧ್ಯಮವರ್ಗದ ಅಪೇಕ್ಷೆಗಳು ಇವೆ. ಕೆಲವು ಕಡೆ ಇವರು ತಮ್ಮ

ಇದೇ ರೀತಿಯಲ್ಲಿ ಯೋಚಿಸಿ ಬರೆದವರಲ್ಲಿ ಮುಖ್ಯರೆಂದರೆ ಪುರುಷೋತ್ತಮ ಬಿಳಿಮಲೆ ಅರವಿಂದ ಮಾಲಗತ್ತಿ, ರಂಗಾರೆಡ್ಡಿ ಹಾಗೂ ವೀರಣ್ಣ ದಂಡೆ ಅವರು "ಬಹುಸಂಖ್ಯಾತ ಜನವರ್ಗದ ಜ್ಞಾನವನ್ನು ಈಗ ಸಂಗ್ರಹಿಸಿ ವಿಶ್ಲೇಷಿಸಬೇಕಾಗಿದೆ" ನನ್ನ ಜಾನಪದ ಅಧ್ಯಯನ "ಚಾರಿತ್ರಿಕವಾಗಿ ನಿರ್ಲಕ್ಷಿತರಾಗಿದ್ದ ಜನರ ಜ್ಞಾನದ ಅನ್ವೇಷಣೆಗೆ ಸೀಮಿತವಾಗಿದೆ"(ಪು.೧೧೧, ೧೯೯೦ ಕರಾವಳಿ ಜಾನಪದ) ಎನ್ನುತ್ತಾರೆ. ದಲಿತ ವರ್ಗದ ಜನರ ನೆಲೆಯಿಂದ ಜಾನಪದವನ್ನು ವಿಶ್ಲೇಷಿಸುವ ಮಾಲಗತ್ತಿ ಅವರು ಜನಪದಗಳ ವಿಶಿಷ್ಟತೆಯನ್ನು ಗುರುತಿಸುವುದರ ಜೊತೆಗೆ ಪರಸ್ಪರ ಶೋಷಿಸುವ ಅಂಶಗಳ ಅಸ್ತಿತ್ವನ್ನು ಗುರುತಿಸುತ್ತಾರೆ. ದಂಡೆಯವರು "ಕನ್ನಡ ಜಾನಪದ ಪ್ರಜ್ಞೆ"ಯೊಂದಿದೆ, ಅದು ಕರ್ನಾಟಕವನ್ನು ಜಾನಪದೀಯವಾಗಿ ಪ್ರತ್ಯೇಕವಾಗಿಯೇ ಗುರುತಿಸಲು ಸಾಕು ಎನ್ನುತ್ತಾರೆ. (vi, ಕನ್ನಡ ಜಾನಪದ ಪ್ರಜ್ಞೆ)

ಈ ಕಾಲಘಟ್ಟದ ಜಾನಪದ ಅಧ್ಯಯನ ಕರ್ನಾಟಕ ಜನಪದ ಸಂಸ್ಕೃತಿಯ ಅಧ್ಯಯನ ಎನ್ನುವ ಸ್ಥಿತಿಯನ್ನು ತಲುಪಿದೆ. ಕರ್ನಾಟಕದಾದ್ಯಂತ ಈ ಮನೋಧರ್ಮ ಕಂಡುಬರುತ್ತದೆ. ಜನಪದ ಕಲೆಗಳ ಪ್ರದರ್ಶನ ಇಲ್ಲದ ಸಮಾರಂಭಗಳು ಇಲ್ಲ ಎನ್ನುವ ಸನ್ನಿವೇಶ ಸೃಷ್ಟಿಯಾಗಿದೆ. ಸಾಮಾಜಿಕ, ಧಾರ್ಮಿಕ, ರಾಜಕೀಯ-ಎಲ್ಲ ಸಭೆ, ಸಮಾರಂಭ ಹಾಗೂ ಸಾಮೂಹಿಕ ಚಟುವಟಿಕೆಗಳಲ್ಲಿ ಜನಪದ ಕಲೆ ಇಲ್ಲವೆ ಜಾನಪದ ಚಿಂತನೆ ಇದ್ದೇ ಇರುತ್ತದೆ. ಇದೇ ಸಂದರ್ಭದಲ್ಲಿ ಕರ್ನಾಟಕ ಸರ್ಕಾರ ಕರ್ನಾಟಕ ಜಾನಪದ ಅಕಾಡೆಮಿಯನ್ನು ಸ್ಥಾಪಿಸಿದೆ. ಜನಪದ ಕಲಾವಿದರಿಗೆ ಮಾಶಾಸನ, ವಾರ್ಷಿಕ ಕಲಾವಿದ ಹಾಗೂ ಜಾನಪದ ತಜ್ಞ ಪ್ರಶಸ್ತಿಗಳು ಸ್ಥಾಪಿತವಾಗಿವೆ.

ಕರ್ನಾಟಕ ಜಾನಪದ 'ಕನ್ನಡ ಜನಪದ' ಎಂಬ ಒಂದು ಪ್ರಧಾನ ಭಾಷೆಯ ಮೂಲಕ ಗುರುತಿಸಲ್ಪಡುತ್ತಿತ್ತು. ೧೯೯೦ರಿಂದ ಈಚೆಗೆ ಕರ್ನಾಟಕದ ಬೇರೆ ಬೇರೆ ಭಾಷಾ ಜಾನಪದಗಳನ್ನು; ಅಲೆಮಾರಿ ಜನಪದಗಳನ್ನು ಹಾಗೂ ಬುಡಕಟ್ಟು ಜನಪದಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಮೂಲಕ ಬರಗೂರು ರಾಮಚಂದ್ರಪ್ಪ ನಲವತ್ತು ಬುಡಕಟ್ಟು ಹಾಗೂ ಅರೆಬುಡಕಟ್ಟು ಜನಪದಗಳ ಅಧ್ಯಯನ ಕುರಿತ ಪುಸ್ತಕಗಳನ್ನು 'ಉಪಸಂಸ್ಕೃತಿಗಳು' ಎನ್ನುವ ಹೆಸರಿನಲ್ಲಿ ಪ್ರಕಟಿಸಿದರು. ಜಾನಪದ ಅಕಾಡೆಮಿ ಹೆಚ್.ಜೆ. ಲಕ್ಕಪ್ಪಗೌಡ ಅವರ ನೇತೃತ್ವದಲ್ಲಿ ಬುಡಕಟ್ಟು ವಿಶ್ವಕೋಶಗಳನ್ನು ಪ್ರಕಟಿಸಿತು. ಅವಗಣಿಸಲ್ಪಟ್ಟ ಜಾನಪದ ಪ್ರಕಾರಗಳ ಸಂಗ್ರಹ ಹಾಗೂ ವಿಶ್ಲೇಷಣೆಗೆ ವಿಶೇಷ ಗಮನ ಕೊಡಲಾಯಿತು. ಸ್ತ್ರೀವಾದಿ ನೆಲೆಯಲ್ಲಿ ಜಾನಪದವನ್ನು ಅಧ್ಯಯನ ಮಾಡುವ ಪ್ರಯತ್ನವೂ ನಡೆದಿದೆ. ಬುಡಕಟ್ಟು ಜನರ ಜನಪದ ತಂತ್ರಜ್ಞಾನ ಹಾಗೂ ವೈದ್ಯವನ್ನು ಪುನರುಜ್ಜೀವಿಸುವ ದೃಷ್ಟಿಯಲ್ಲಿ ಅನೇಕ ಜಾನಪದ ಕಮ್ಮಟಗಳೂ ನಡೆದಿವೆ.

'ಜನಪದ ಕರ್ನಾಟಕ'ವನ್ನು ಸಮರ್ಥಿಸುವ ಮತ್ತೊಂದು ಪ್ರಯತ್ನವಾಗಿ ಕರ್ನಾಟಕದಲ್ಲಿ ದೊರೆಯುತ್ತಿರುವ ಎಲ್ಲ ಜನಪದ ಮಹಕಾವ್ಯಗಳನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ. ಈ ನಿಟ್ಟಿನಲ್ಲಿ ಕನ್ನಡ ವಿಶ್ವವಿದ್ಯಾಲಯ ಮಂಟೇಸ್ವಾಮಿ, ಜುಂಜಪ್ಪ, ಮೈಲಾರ, ಕುಮಾರರಾಮ

ಹಾಗೂ ಕೃಷ್ಣಗೌಡ್ರ ಜಾನಪದ ಮಹಾಕಾವ್ಯಗಳನ್ನು ಸಂಗ್ರಹಿಸಿ ಪ್ರಕಟಿಸಿದೆ. ಹಾಸಗಿಯವರು ಮಲೆಯ ಮಾದೇಶ್ವರ ಹಾಗೂ ಎಲ್ಲಮ್ಮನ ಕಾವ್ಯವನ್ನು ಪ್ರಕಟಿಸಿದ್ದಾರೆ. ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕನ್ನಡ ಮತ್ತು ಕರ್ನಾಟಕದ ಇತರ ಭಾಷಾಸಂಸ್ಕೃತಿಗಳ ಅಭಿವೃದ್ಧಿಗಾಗಿ ಕೆಲಸ ಮಾಡುತ್ತಿದೆ. ಕರ್ನಾಟಕ ಜಾನಪದ ಅಕಾಡೆಮಿ ೧೯೯೯ರಲ್ಲಿ 'ಕರ್ನಾಟಕ ಜಾನಪದ ಅಕಾಡೆಮಿಯ ಸಾಂಸ್ಕೃತಿಕ ನೀತಿ' ಎಂಬ ಪ್ರಣಾಳಿಕೆಯ ಅಡಿಯಲ್ಲಿ ಕರ್ನಾಟಕವನ್ನು ಒಟ್ಟು ಒಂದು ಜನಪದವಾಗಿ ಗ್ರಹಿಸಲು ಹೊರಟಿದೆ.

ಸ್ವಾತಂತ್ರ್ಯ ಹೋರಾಟ ಮತ್ತು ಸ್ವಾತಂತ್ರ್ಯ ನಂತರದಲ್ಲಿ ದೇಶೀಯತೆಯ ಬಗ್ಗೆ ಮಾತನಾಡಿದ ಹಲವರಿದ್ದಾರೆ. ಸಾಹಿತಿಗಳು, ಅರ್ಥಶಾಸ್ತ್ರಜ್ಞರು, ರಾಜಕಾರಣಿಗಳು ಹಾಗೂ ಗಾಂಧಿವಾದಿಗಳು ಗಾಂಧೀಜಿ ಅವರಿಂದ ಪ್ರಭಾವಿತರಾಗಿ ದೇಶೀಯತೆಯ ಬಗ್ಗೆ ಮಾತನಾಡಿದರು. ಇವರ ದೇಶೀ ಪರಿಕಲ್ಪನೆಗೆ ಒಟ್ಟು ಭಾರತವನ್ನು ಕುರಿತ 'ಭಾರತ ದೇಶೀಯತೆ: ಕನ್ನಡ ದೇಶೀಯತೆ'ಯ ಬಗ್ಗೆ ಮಾತನಾಡಲು ತೊಡಗಿದ್ದು ಕಳೆದ ಶತಮಾನದ ಎಂಬತ್ತರ ದಶಕದಿಂದ. ಹೀಗೆ ಮಾತನಾಡಿದವರಲ್ಲಿ ಸಾಹಿತಿಗಳು ಮತ್ತು ಜನಪರ ಹೋರಾಟಗಳ ನಾಯಕರು, ಮುಖ್ಯರು. ಇಲ್ಲಿಯವರೆಗಿನ ಕನ್ನಡ ದೇಶೀ ಚಿಂತನೆಯ ನೆಲೆಗಳನ್ನು ಕೆಳಗಿನಂತೆ ಕ್ರೋಢೀಕರಿಸಲಾಗಿದೆ.

೧. ಕರ್ನಾಟಕವನ್ನು ಕನ್ನಡಭಾಷೆಯ ಮೂಲಕ ಸಾಧಿತವಾದ ಒಂದು ಸ್ವತಂತ್ರ ಚಾರಿತ್ರಿಕ ಸಂಭವ ಎಂದು ಗುರುತಿಸುವುದು.
೨. ಸ್ವದೇಶಿ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಕರ್ನಾಟಕವನ್ನು ಸ್ವತಂತ್ರ ಹಾಗೂ ಪ್ರತ್ಯೇಕ Native State ಆಗಿ ಗುರುತಿಸುವುದು.
೩. ಕರ್ನಾಟಕದ ದೇಶೀಜ್ಞಾನವನ್ನು ಪಾಶ್ಚಾತ್ಯ ಹಾಗೂ ಭಾರತದ ಅಭಿವೃದ್ಧಿ ಜ್ಞಾನದ ಜೊತೆಗೆ ಸಮನಾಗಿ ಬೆಳೆಸುವ ಮೂಲಕ ಒಂದು ಸ್ವತಂತ್ರ ಸ್ವದೇಶವನ್ನಾಗಿ ನೋಡುವುದು.

ಭಾಷೆ ಬರಿ ಮಾತು ಅಲ್ಲ; ಅದು ಸಂಸ್ಕೃತಿ. ಅದೇ ರೀತಿ ಅದೊಂದು ಚಾರಿತ್ರಿಕ ಉತ್ಪನ್ನ ಹಾಗೂ ಚರಿತ್ರೆ. ಭಾಷೆಯ ಮೂಲಕ ಜನಾಂಗ ಹಾಗೂ ಸಂಸ್ಥಾನಗಳು ಬಹಳಕಾಲದಿಂದ ಬದುಕಿ ನೆಲೆನಿಂತಿವೆ. ಅಂಥ ಭಾಷೆಯ ಮೂಲಕ ಒಂದು ಸಂಸ್ಥಾನದ ಅಸ್ಮಿತೆ ಇದ್ದೇ ಇದೆ. ಕರ್ನಾಟಕ ಅಂತ ಒಂದು ಭಾಷಾ ಅಸ್ಮಿತೆ ಕನ್ನಡ ಸಾಹಿತಿಗಳು ಈ ಕೆಲಸವನ್ನು ಯಶಸ್ವಿಯಾಗಿ ಮಾಡುತ್ತಾ ಬಂದಿದ್ದಾರೆ. ಕನ್ನಡ ಒಂದು ದೇಶೀ ನೆಲೆಯ ಭಾಷೆಯಾದ ರಿಂದ ಕರ್ನಾಟಕದ ಪರಿಕಲ್ಪನೆ ಕೂಡ ದೇಶೀಯ ಎಂದು ಇವರು ಹೇಳುತ್ತಾರೆ. ಕೆಲವು ಜನಪರ ಹೋರಾಟ ಸಂಘಟನೆಗಳು, ಅದರಲ್ಲೂ ಕರ್ನಾಟಕ ವಿಮೋಚನಾರಂಗ ಸ್ವತಂತ್ರ ಭಾರತದಲ್ಲಿ ಸ್ವಾಯತ್ತ ಕರ್ನಾಟಕ ಎಂಬ ಪ್ರಣಾಳಿಕೆಯನ್ನೆ ಮುಂದಿಟ್ಟುಕೊಂಡಿದೆ. 'ಕನ್ನಡ ಶಕ್ತಿ ಕೇಂದ್ರ' ಎಂಬ ಕರ್ನಾಟಕದ ಸಂಘಟನೆಯೊಂದು ಕನ್ನಡ ಭಾಷೆಯ ಮೂಲಕವೇ ಕರ್ನಾಟಕದ ಉದ್ಧಾರ ಎಂಬ ನಿಲುವಿನಿಂದ ಹೋರಾಡುತ್ತಿದೆ. ಇದೆ ತಾತ್ವಿಕ ನಿಲುವಿನ ಸಂಘಟನೆಗಳೂ ಇವೆ. ಈ ತತ್ವವನ್ನು ತಮ್ಮ ಪ್ರಣಾಳಿಕೆಯಲ್ಲಿ ಜೋಡಿಸಿಕೊಂಡ ರಾಜಕೀಯ ಪಕ್ಷಗಳೂ ಇವೆ. ೧೯೯೨ರಲ್ಲಿ ಬರೆದ 'ಕನ್ನಡ ಮತ್ತು ಕರ್ನಾಟಕ ಪುನರ್‌ನಿರ್ಮಾಣ' ಎಂಬ ಲೇಖನದಲ್ಲಿ ಡಿ.ಆರ್.

ರಾಮಚಂದ್ರೇಗೌಡ ಕರ್ನಾಟಕ ದೇಶಿ ಅಸ್ಮಿತೆ ಹೇಗೆ ಎಂಬುದನ್ನು ಕೆಳಗಿನಂತೆ ನಿರೂಪಿಸಿದ್ದಾರೆ.

೧. ಕನ್ನಡ ಜನ ಮತ್ತು ಕನ್ನಡ ಭಾಷೆಯೊಂದಿಗೆ ತನ್ನದೆ ಆದ ಪ್ರದೇಶವನ್ನು ಪ್ರತಿಪಾದಿಸುವುದರೊಂದಿಗೆ

೨. ಕನ್ನಡ ಸಂಸ್ಕೃತಿ ಭಾರತದಲ್ಲಿ ಒಂದು ವಿಶಿಷ್ಟ ಅನನ್ಯತೆಯಾಗಿ ಎದ್ದು ಕಾಣುವುದರೊಂದಿಗೆ

೩. ಕನ್ನಡ ಸಂಸ್ಕೃತಿ ಬೆಳೆಯಲು ತನ್ನ ದೇಶೀಯ ಅಭಿವೃದ್ಧಿಯೊಂದಿಗೆ ಪ್ರಾಪಂಚಿಕ ಪ್ರಗತಿಯ ಜೊತೆಗೆ ರಚನಾತ್ಮಕವಾಗಿ ಸೇರಿಕೊಂಡು ಮುನ್ನಡೆಯುವುದರೊಂದಿಗೆ.

ಕನ್ನಡ ಸಂಸ್ಕೃತಿಯ ಬಗೆಗಿನ ಈ ಆಲೋಚನೆ ಜನಪದರ ಜೀವನವನ್ನು ಆಧಾರವಾಗಿಟ್ಟುಕೊಂಡಿದೆ ಹೊರತು ಆಡಳಿತ ವರ್ಗದ ಕನ್ನಡ-ಕರ್ನಾಟಕ ಪರಿಕಲ್ಪನೆಯನ್ನಲ್ಲ.

ಜಾನಪದದಲ್ಲಿ ದೇಶೀಯತೆಯ ಬಗ್ಗೆ ಮಾತನಾಡುತ್ತಿರುವ ಪ್ರಮುಖ ಜಾನಪದ ವಿದ್ವಾಂಸರೆಂದರೆ ಹಿ.ಶಿ. ರಾಮಚಂದ್ರೇಗೌಡ ಮತ್ತು ಅರವಿಂದ ಮಾಲಗತ್ತಿ. ಕನ್ನಡ-ಕರ್ನಾಟಕ ದೇಶೀಯತೆಯ ಪ್ರತಿಪಾದನೆಯಲ್ಲಿ ರಾಮಚಂದ್ರೇಗೌಡ ಕರ್ನಾಟಕ ಜಾನಪದ ಜ್ಞಾನ ಒಂದು ವಿಶಿಷ್ಟ ಜ್ಞಾನಮಾದರಿ. ಅಮೇರಿಕದ ವೈಜ್ಞಾನಿಕ ಶೋಧನೆ ಮೂಲತಹ ಆ ದೇಶದ ಪ್ರಾದೇಶಿಕ ಉತ್ಪತ್ತಿ. ಆದರೆ ಅವರು ತಮ್ಮ ರಾಜಕೀಯ ಶಕ್ತಿಯ ಮೂಲಕ ಅದನ್ನು ಜಗತ್ತಿನ ಆಧುನಿಕ ಜ್ಞಾನವಾಗಿ ಒಪ್ಪಿಕೊಳ್ಳುವಂತೆ ಮಾಡಿದ್ದಾರೆ. ಕನ್ನಡ ನಾಡಿನದೂ ಇಂಥ ಉತ್ಪತ್ತಿ ಇದೆ. ಅದು ಬೆಳವಣಿಗೆಯಲ್ಲಿ ಹಿಂದೆ ಬಿದ್ದಿದೆ. ಪ್ರಬಲ ರಾಷ್ಟ್ರಗಳ ಒತ್ತಡ ಮತ್ತು ನಮ್ಮ ಮರೆವೆಯಿಂದ ನಮ್ಮ ಸ್ಥಳೀಯ ಜ್ಞಾನವನ್ನು ಅಭಿವೃದ್ಧಿಪಡಿಸಿಲ್ಲ. ಇದೆಲ್ಲ ನಮ್ಮ ಜಾನಪದ ಜ್ಞಾನ. ಇದನ್ನು ಅಭಿವೃದ್ಧಿಪಡಿಸುವ ಹಠ ಮತ್ತು ಹೊಣೆಗಾರಿಕೆಯಿಂದ ಸ್ವತಂತ್ರ, ಸ್ವಶಕ್ತ ಜನಪದ ಕರ್ನಾಟಕವನ್ನು ಕಟ್ಟಬಹುದು ಎನ್ನುತ್ತಾರೆ ೧೯೮೭ರ ತಮ್ಮ ಬಾಂಬ್, ಹೆಣ್ಣು ಮತ್ತು ಜಾನಪದ ಎಂಬ ಲೇಖನದಲ್ಲಿ.

"ಭಾರತದಂಥ ಭಿನ್ನ ಸಂಸ್ಕೃತಿಗಳ, ಜನಪದಗಳು ವಾಸ ಮಾಡುವ ದೇಶದಲ್ಲಿ...ಭಿನ್ನ ಸಂಸ್ಕೃತಿಗಳನ್ನು ಗೌರವಿಸದೆ: ಸಮಾನ ಸ್ಥಾನಮಾನಗಳನ್ನು ಕೊಡದೆ ಭಾರತದ ಅಸ್ತಿತ್ವವನ್ನು ಭಾವಿಸಿಕೊಳ್ಳುವುದೆ ಸಾಧ್ಯವಾಗುವುದಿಲ್ಲ.

ಹಳ್ಳಿಯ ಕಸುಬುಗಳೆ ಒಂದೊಂದು ಸ್ವತಂತ್ರ ವೈಜ್ಞಾನಿಕ ಉದ್ಯೋಗವಾಗಬೇಕು. ತಂತ್ರಜ್ಞಾನ ಮತ್ತು ಅಭಿವೃದ್ಧಿ ಎಂಬುದು ಅನ್ಯದೇಶೀಯ ಕಲ್ಪನೆಯಲ್ಲ, ಸ್ವದೇಶಿ ಬೆಳವಣಿಗೆ ಕೂಡ". (ಪು. ೫, ಜಾನಪದ ಅಂತರಂಗ ೧೯೮೭)

೧೯೯೩ರ ದೇಶಿವಾದ ಮತ್ತು ಜಾನಪದ ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಿದ ಲೇಖನದಲ್ಲಿ ದೇಶೀಯತೆಯನ್ನು ಕುರಿತು "ದೇಶೀಯತೆ ಎಂದರೆ ಒಂದು ಜನಪದದ ಶುದ್ಧರೂಪವಲ್ಲ; ಸಂಸ್ಕೃತಿಗಳ ಪಾರಸ್ಪರಿಕ ವಿವೇಚನೆಯಲ್ಲಿ ಎದ್ದುಕಾಣುವ ಅಂಶ. ಇದು ಕೂಡ ಹಲವು ಆರ್ಥಿಕ-ಸಾಮಾಜಿಕ ಸ್ಥಿತ್ಯಂತರಗಳ ಪರಿಣಾಮ" ಅಂದರೆ " ಜಾನಪದದಲ್ಲಿ ದೇಶೀಯತೆ ಎಂದರೆ ಒಂದು ಜಾನಪದಕ್ಕೆ ಇರುವ ಸ್ಪಷ್ಟ, ನಿರ್ದಿಷ್ಟ ಆರ್ಥಿಕ-ಸಾಮಾಜಿಕ ಚರಿತ್ರೆ" (ಪು. ೨೪-೨೫, " ಅದೇ)

ಕರ್ನಾಟಕದಲ್ಲಿ ಜಾನಪದದ ಬಗ್ಗೆ ದೇಶೀಯ ನೆಲೆಯಲ್ಲಿ ಮಾತನಾಡುವ ಅರವಿಂದ ಮಾಲಗತ್ತಿ ಅವರು ಭಾರತದ ಜಾನಪದ ಇತರ ದೇಶಗಳ ಜಾನಪದಕ್ಕಿಂತ ಭಿನ್ನ. ಅದಕ್ಕೆ ಕಾರಣ ಇಲ್ಲಿರುವ ಜಾತಿ ಧರದ ವೈವಿಧ್ಯಗಳು ಎನ್ನುತ್ತಾರೆ. ಅವರು "ಈ ವೈದಿಕ ದಾಸ್ಯತ್ವ, ಆರ್ಥಿಕ ದಾಸ್ಯತ್ವದಿಂದ ಮುಂದುವರಿದು, ರಾಜಕೀಯ, ಧಾರ್ಮಿಕ, ಶೈಕ್ಷಣಿಕ, ಭಾಷಿಕ ಇಂಥವೆಲ್ಲಾ ದಾಸ್ಯಗಳಿಂದ ಮುಕ್ತರಾಗಲು ನಮಗೆ ದೇಶೀವಾದವೇ ಮೂಲ ಮಂತ್ರ. ಒಂದು ಜನಾಂಗದ ಹಾಗೂ ನೆಲೆನಿಂತ ದುಗ್ಗಾನ ವಾಸನೆಯಿಂದ ಹೊರಬಂದ ಸೂತ್ರಬದ್ಧವಾದ ಮೊತ್ತವನ್ನು ದೇಶೀವಾದ ಎಂದು ಕರೆಯಬಹುದು (ಪು. ೮೫-೮೬-ಜಾನಪದ ಸೈದ್ಧಾಂತಿಕ ಪ್ರಜ್ಞೆ ಮತ್ತು ದೇಶೀವಾದ ೧೯೯೮)

ಜನಪದ ಕರ್ನಾಟಕದ ಅನನ್ಯತೆ ಈಗ ಇನ್ನಷ್ಟು ಭದ್ರವಾಗುತ್ತಿದೆ. ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ದೇವರಾಜ ಅರಸು ಎಲ್ಲ ಕೆಳವರ್ಗಗಳೂ ಕರ್ನಾಟಕದ ರಾಜಕೀಯ ಹಾಗೂ ಶೈಕ್ಷಣಿಕ ಕ್ಷೇತ್ರದಲ್ಲಿ ಪಾಲುದಾರರಾಗುವಂತೆ ಮಾಡಿದರು. ಮುಂದೆ ಬಂದ ಸರ್ಕಾರಗಳು ಕೂಡ ಈ ಅವಕಾಶವನ್ನು ಮುಂದುವರಿಸಿದವು. ಇದರಿಂದಾಗಿ ಕರ್ನಾಟಕದೊಳಗಿನ ಪ್ರತಿಯೊಂದು ಚಿಕ್ಕಪುಟ್ಟ ಸಾಂಸ್ಕೃತಿಕ ಗುಂಪುಗಳೂ ತಮ್ಮ ಅನನ್ಯತೆಯನ್ನು ಎತ್ತಿ ಹಿಡಿಯಲು ಮುಂದಾದವು. ಈ ಗುಂಪುಗಳಿಗೆ ಸಂಸ್ಕೃತಿ ಎಂಬುದು ಅವರ ಪಾರಂಪರಿಕ ಜಾನಪದ ಜ್ಞಾನವೇ ಆಗಿತ್ತು. ಆದುದರಿಂದ ತಮ್ಮ ಜಾನಪದ ಸಂಗ್ರಹದ ಮೂಲಕ, ಆ ಜನಪದದ ವಿಶಿಷ್ಟತೆಯನ್ನು ಪ್ರಶಂಸಿಸಿಕೊಳ್ಳುವ ಮೂಲಕ ತಮ್ಮ ಜನಪದಗಳನ್ನು ಭದ್ರಪಡಿಸಿಕೊಂಡವು. ಇದು ಕರ್ನಾಟಕವನ್ನು ಜಾನಪದೀಯವಾಗಿ ಗುರುತಿಸಲು ನೆರವಾಗಿದೆ.

ತಮ್ಮ ಪಾರಂಪರಿಕ ಜನಪದಗಳನ್ನು ಸಮಕಾಲೀನ ಸಂದರ್ಭಕ್ಕೆ ಸಮರ್ಥಿಸಿಕೊಳ್ಳುವ ಕರ್ನಾಟಕದ ಜನಪದಗಳು ಆಧುನಿಕ ಸೌಲಭ್ಯಗಳನ್ನು ಪಡೆಯುವಲ್ಲಿ ಹಿಂದೆ ಹೋಗಲಿಲ್ಲ. ತಮ್ಮ ಪಾರಂಪರಿಕ ಜನಪದದೊಳಕ್ಕೆ ಆಧುನಿಕ ತಂತ್ರಜ್ಞಾನವನ್ನು ಸೇರಿಸಿಕೊಂಡವು. ಆದರೆ ಹೀಗೆ ಪಡೆದ ಆಧುನಿಕ ತಂತ್ರಜ್ಞಾನವನ್ನು ತಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗ ಎಂಬಂತೆ ಪಡೆದುಕೊಂಡಂತೆ ಕಾಣುವುದಿಲ್ಲ. ಸಂಸ್ಕೃತಿ ಜೀವನ ಒಳಗಿನದು, ತಾಂತ್ರಿಕ ಜೀವನ ವಿಧಾನ ಹೊರಗಿನದು ಎಂಬ ಧೋರಣೆಯನ್ನೆ ತಳೆದಿವೆ. ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ ಸಾಂಸ್ಕೃತಿಕ ಬದುಕು ನಿಜದ ಬದುಕು. ತಂತ್ರಜ್ಞಾನ ಸಾಮಗ್ರಿ ಒಂದು ಪೋಕಿ ಎಂದು ಭಾವಿಸಿದಂತೆ ಕಾಣುತ್ತಿದೆ. ಆದರೆ ಈ ಎಲ್ಲ ಅರಿವನ್ನು ಗಲ್ಲುವಂತೆ ಜಾಗತೀಕರಣ ಕರ್ನಾಟಕ ಜನಪದ-ಜಾನಪದಗಳ ಮೇಲೆ ಸವಾರಿ ಹೊರಟಿದೆ.

# ದೇಗಲೂರು: ಮಹಾರಾಷ್ಟ್ರದ ಒಂದು ಕನ್ನಡ ಸ್ಥಳನಾಮ

● ಉಪಾಧ್ಯ ಜಿ.ಎಸ್.

ನೆರೆಯ ರಾಜ್ಯಗಳಾದ ಕರ್ನಾಟಕ ಹಾಗೂ ಮಹಾರಾಷ್ಟ್ರಗಳ ನಡುವೆ ಸುಮಾರು ೨೦೦೦ ವರ್ಷಗಳ ಆಡಳಿತಾತ್ಮಕ ಸಂಬಂಧವಿದೆ. ಇಂದಿನ ಮಹಾರಾಷ್ಟ್ರ ಭೌಗೋಳಿಕವಾಗಿ ವಿಶಾಲ ವಾದುದು; ಆದರೆ ಅದಕ್ಕಿರುವ ಇತಿಹಾಸ ಚಿಕ್ಕದು. ಆದ್ದರಿಂದ ಪ್ರಾಚೀನ ಕರ್ನಾಟಕದ ಇತಿಹಾಸವೇ ಪ್ರಾಚೀನ ಮಹಾರಾಷ್ಟ್ರದ ಇತಿಹಾಸವಾಗಿದೆ. ಹೆಚ್ಚುಕಡಿಮೆ ಇಂದಿನ ಇಡೀ ಮಹಾರಾಷ್ಟ್ರ ಪ್ರಾಚೀನ ಕರ್ನಾಟಕದ ಪ್ರಾಂತವೇ ಆಗಿತ್ತು. ಇದಕ್ಕೆ ಸಿಗುವ ಮುಖ್ಯ ಆಕರಗಳೆಂದರೆ ಮಹಾರಾಷ್ಟ್ರದ ಕನ್ನಡ ಶಾಸನಗಳು. ಇಂದಿನ ಮಹಾರಾಷ್ಟ್ರದಲ್ಲಿ ಸುಮಾರು ೮೦೦ ಕನ್ನಡ ಶಾಸನಗಳು ಉಪಲಬ್ಧವಾಗಿವೆ. ಮಹಾರಾಷ್ಟ್ರದಲ್ಲಿ ಲಭ್ಯವಾದ ಶಾಸನಗಳಲ್ಲಿ ಕನ್ನಡದ್ದೇ ಮೇಲುಗೈ. ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಕ, ಸಾಂಸ್ಕೃತಿಕ ಹೀಗೆ ಹಲವು ದೃಷ್ಟಿಯಿಂದ ಇಲ್ಲಿನ ಶಾಸನಗಳು ಕರ್ನಾಟಕದ ಇತಿಹಾಸದ ಮೇಲೆ ಹೊಸಬೆಳಕು ಚೆಲ್ಲುತ್ತವೆ. ಮಹಾರಾಷ್ಟ್ರದ ಅರ್ಧದಷ್ಟು ಗ್ರಾಮನಾಮಗಳಿಗೆ ಕನ್ನಡದಲ್ಲೇ ನಿಷ್ಪತ್ತಿ ಹೇಳಬೇಕಾ ಗುತ್ತದೆ. ಈ ಭಾಗದಲ್ಲಿ ಕನ್ನಡ ಸಂಸ್ಕೃತಿ ತಲೆಯೆತ್ತಿ ನಿಂತಿತ್ತು ಎಂಬುದಕ್ಕೆ ಇಂದಿಗೂ, ಇಲ್ಲಿ ಉಳಿದುಕೊಂಡು ಬಂದಿರುವ ನೂರಾರು ಸ್ಥಳನಾಮಗಳು ಸಾಕ್ಷಿಗಳಾಗಿವೆ. ಕಾವೇರಿಯಿಂದ ಗೋದಾವರಿಯವರೆಗೆ ಕನ್ನಡ ನಾಡು ವಿಸ್ತಾರವಾಗಿತ್ತು ಎಂಬ ಕವಿರಾಜಮಾರ್ಗಕಾರನ ಮಾತನ್ನು ಇಲ್ಲಿನ ಕನ್ನಡ ಶಾಸನಗಳು, ಸ್ಥಳನಾಮಗಳು ಶ್ರುತಪಡಿಸುತ್ತವೆ. ಈ ನಿಟ್ಟಿನಲ್ಲಿ 'ಅಮರಾವತೀ ಪುರ' ದೇಗಲೂರೆ? ಎಂಬ ಶೋಧದಲ್ಲಿದೆ.

ಮಹಾರಾಷ್ಟ್ರದ ನಾಂದೇಡ್ ಜಿಲ್ಲೆಯ ನಾಲ್ಕು ಕನ್ನಡ ಶಾಸನಗಳಲ್ಲಿ ಅಮರಾವತೀಪುರದ ಉಲ್ಲೇಖ ಬಂದಿದೆ. ಈ ಅಮರಾವತೀಪುರ ಯಾವುದು? ಇದರ ಮೂಲ ಹೆಸರೇನು? ನಾಂದೇಡ್ ಜಿಲ್ಲೆಯ ದೇಗಲೂರು: ಶಾಸನಗಳಲ್ಲಿ ದಾಖಲಾದ ಅಮರಾವತೀಪುರವೇ? ಹಾಗಾದರೆ ದೇಗಲೂರನ್ನು ಅಮರಾವತೀಪುರವೆಂದು ಕರೆಯಲು ಕಾರಣವೇನು? ಎಂಬೆಲ್ಲ ಪ್ರಶ್ನೆಗಳಿಗೆ ಸ್ಪಷ್ಟ ಉತ್ತರ ದೊರಕುವುದಿಲ್ಲ. ಆದರೆ ಇತಿಹಾಸದ ಈ ಕಗ್ಗಂಟನ್ನು ಬಿಡಿಸಲು ಶಾಸನಗಳು ನಮಗೆ ನೆರವಾಗುತ್ತವೆ.

ದೇಗಲೂರು ಅಮರಾವತೀಪುರವಾದುದಾದರೂ ಹೇಗೆ? ಶಾಸನಕಾರರು ದೇಗಲೂರಿಗೆ

ಸಾಮಾನ್ಯವಾಗಿ ಅಮರಾವತೀಪುರ ಎಂದು ಹಾಕಿಕೊಂಡರೆ ಎಂಬೆಲ್ಲ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಮೊದಲು, ಅಮರಾವತೀಪುರದ ಉಲ್ಲೇಖಗಳನ್ನು ಹೊತ್ತಿರುವ ನಾಲ್ಕು ಶಾಸನಗಳನ್ನು ಸಂಕ್ಷಿಪ್ತವಾಗಿ ಗಮನಿಸುವುದೊಳಿತು.

೧. ೧೦೬೬ ಮುಖೇಡ್ ತಾಲೂಕಿನ ಏಕ್ಲಾರ ಶಾಸನ'ದಲ್ಲಿ ಅಮರಾವತೀಪುರದ ಉಲ್ಲೇಖ ಬಂದಿದೆ. ಇದು ಕಲ್ಯಾಣ ಚಾಲುಕ್ಯ ದೊರೆ ೧ನೇ ಸೋಮೇಶ್ವರನ ಕಾಲಕ್ಕೆ ಸೇರಿದುದಾಗಿದೆ. ೧ನೇ ಸೋಮೇಶ್ವರನ ಸಾಮಂತರಾಜನಾಗಿ ಕರ್ಕಪರಸನಿದ್ದ. ಈತನನ್ನು 'ಅಮರಾವತೀಪುರದ ರೇಶ್ವರ' ಎಂದು ಸಂಬೋಧಿಸಲಾಗಿದೆ. ಮಹಾಸಾಮಂತ ಕರ್ಕಪರಸ ಸಕ್ಕರಗೆ ಎಂಭತ್ತನಾಲ್ಕರ ಒಳಗಿಯ ಒಕ್ಕಲುಗಾದೆಯ ಮಲ್ಲೇಶ್ವರ ದೇವರಿಗೆ ದತ್ತಿದಾನಗಳನ್ನು ಬಿಟ್ಟ ಉಲ್ಲೇಖವಿದೆ.

೨. ೧೦೭೭ರ ದೆಗ್ಲೂರ ತಾಲೂಕಿನ ತಡಕಲ್ಲು ಶಾಸನದಲ್ಲಿಯೂ ಅಮರಾವತಿಯ ಉಲ್ಲೇಖ ಬಂದಿದೆ. ಇದು ೨ನೇ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದ ಶಾಸನವಾಗಿದೆ. ಇಲ್ಲಿ ಸಾಮಂತರಾಜನ ಹೆಸರಿದ್ದ ಶಾಸನದ ಭಾಗ ನಾಶವಾಗಿ ಹೋಗಿದೆ. ಈ ಸಾಮಂತ ದೊರೆಯ ಕೈಕೆಳಗೆ ದಾಜಿಮಂಡದ ಮೀರನಾದ ದಂಡನಾಯಕ ಕಾಳಿಮಯ್ಯನಿದ್ದ. ಕರ್ಕಪರಸನ ಹೆಸರಿನಲ್ಲಿ ಆತ ಕರಡಿಕಲ್ಲಿನಲ್ಲಿ ಜಿನಾಲಯವೊಂದನ್ನು ಮಾಡಿಸುತ್ತಾನೆ. ಇದೇ ಶಾಸನದಲ್ಲಿ ನಾಂದೇಡ್ ಜಿಲ್ಲೆಯ ಅನೇಕ ಪ್ರದೇಶಗಳ ಉಲ್ಲೇಖವು ಬಂದಿದೆ. ಕರಡಿಕಲ್ಲು ಇಂದಿನ ದೇಗಲೂರು ತಾಲೂಕಿನ ಕರಡಖೇಡವಾಗಿದೆ. ಅದೇ ತಾಲೂಕಿನ ತಡಖೇಲ್‌ನ ಪ್ರಾಚೀನ ರೂಪವೂ ತಡಕಲ್ಲು ಎಂಬುದಾಗಿ ಶಾಸನಗಳಲ್ಲಿ ಕಾಣಸಿಗುತ್ತದೆ.

೨ನೇ ಸೋಮೇಶ್ವರನ ದಂಡನಾಯಕನೂ, ಮಹಾಪರಾಕ್ರಮಿಯೂ ಆಗಿದ್ದ ನಾಗವರ್ಮ ತಡಕಲ್ಲಿನಲ್ಲಿ ರಾಜ್ಯಭಾರ ಮಾಡುತ್ತಿದ್ದ. ೧೦೭೭ರ ದೆಗ್ಲೂರ ತಾಲೂಕಿನ ತಡಕಲ್ಲು ಶಾಸನ'ದಲ್ಲಿ ನಾಗವರ್ಮನನ್ನು ತಡಕಲ್ಲ ಪ್ರಭು ಎಂದು ಕರೆಯಲಾಗಿದೆ. ಈತ ಸಕ್ಕರಗೆ ೬೦ರ ತಡಕಲ್ಲಿನಲ್ಲಿ ಅನೇಕ ದೇವಾಲಯಗಳನ್ನು ನಿರ್ಮಾಣ ಮಾಡಿದ ಅಂಶ ದಾಖಲಾಗಿದೆ. "ತಂದೆಗೆ ನಾರಾಯಣ ದೇವರುಂ ತಾಯಿಗಾದಿತ್ಯ ದೇವರು. ಕಿರಿಯಂಬ್ಬಂಗಯ್ಯೇಶ್ವರ ದೇವರು ತಮ್ಮ ಪೆಸರಲು ಶ್ರೀ ನಾಗೇಶ್ವರ ದೇವರು ತಮ್ಮ ಪತ್ನಿಗೆ ಸರಸ್ವತೀ ಮಂಟಪಮುಂ ಸುತಂಗೆ ಭೈರವದೇವರುಂ, ತಂದೆಗೆ ಮಲ್ಲಿಕಾರ್ಜುನ ದೇವರೊಳಗಾಗಿ ಬೇರೆ ಬೇರೆ ದೇವಾಲಯಗಳಂ ಘಳಿಗೆ ಬಾಗಿಲ್ವಾಡ ಸಂಧ್ಯಾಮಠಮುಂ ವಿಶ್ವಕರ್ಮ ನಿರ್ಮಿತವಾಗಿ ಅನಿತುಮಂ ಮಾಡಿಸಿ ಗಣಪತಿ ಭಗವತೀ ಸಪ್ತಮಾತೃಕೆ ನಂದಿ ನಾಗರೊಳಗಾಗಿ ಸಮಸ್ತ ದೇವತಾ ಪ್ರತಿಷ್ಠೆಗಳಂ" ಮಾಡಿಸಿದನೆಂದು ಅದೇ ಶಾಸನ ಹೇಳುತ್ತದೆ. ನಾಗವರ್ಮ ತಡಕಲ್ಲಿನಲ್ಲಿ ಹತ್ತಾರು ದೇವತೆಗಳನ್ನು ಪ್ರತಿಷ್ಠಾಪಿಸಿದ. ಅನೇಕ ದೇವತೆಗಳಿಂದ ಒಡಗೂಡಿದ ಒಂದು ಬೃಹತ್ ಸಂಕೀರ್ಣವೇ ರೂಪುಗೊಂಡ ವಿಷಯ ಮೇಲಿನ ಶಾಸನದಿಂದ ಖಚಿತವಾಗುತ್ತದೆ. ದೇಗಲೂರನ್ನು ಅಮರಾವತೀಪುರ-ಎಂದು ಕರೆಯಲು ಈ ಘಟನೆಯೂ ಕಾರಣವಾಗಿರಬಹುದು. ಪುರಾಣದ ಪ್ರಕಾರ ದೇವತೆಗಳ ತಾಣ ಅಮರಾವತಿ. ನಾಗವರ್ಮ ತಡಕಲ್ಲಿನಲ್ಲಿ ಹತ್ತಾರು ದೇವರನ್ನು ಪ್ರತಿಷ್ಠಾಪಿಸಿದ್ದರಿಂದ ಅದು ಈ ಲೋಕದ ಅಮರಾವತಿಯೇ ಆಗಿರಬೇಕು.

೩. ೧೧೨೨ರ ದೆಗ್ಲೂರ ತಾಲೂಕಿನ ಬಿಮ್ರಾ ಶಾಸನ ದಲ್ಲಿಯೂ ಈ ಅಮರಾವತೀಪುರದ ಪ್ರಸ್ತಾಪ ಬಂದಿದೆ. ಈ ಶಾಸನ ಕಲ್ಯಾಣ ಚಾಲುಕ್ಯರ ಪ್ರಸಿದ್ಧ ದೊರೆ ಆರನೆಯ ವಿಕ್ರಮಾದಿತ್ಯನಿಗೆ ಸಂಬಂಧಿಸಿದೆ. ಮಹಾಮಂಡಳೇಶ್ವರ ಎರೆಯಮರಸನನ್ನು ಇಲ್ಲಿ ಅಮರಾವತೀಪುರವರೇಶ್ವರ ಎಂದು ಸಂಬೋಧಿಸಲಾಗಿದೆ. ಅಲ್ಲಿ ರೇವಣೇಶ್ವರ ದೇವಾಲಯವಿದ್ದುದನ್ನು ಈ ಶಾಸನ ಹೇಳುತ್ತದೆ.

೪. ಕ್ರಿ.ಶ. ೧೧೩೦ರ ದೆಗ್ಲೂರ ತಾಲೂಕಿನ ಕರಾಡಖೇಡದ ಮತ್ತೊಂದು ಶಾಸನದಲ್ಲಿ ಈ ಎರೆಯಮರಸ ಎರಡಿರ್ಛಾಸಿರ ಬಾಡವನ್ನು ಆಳುತ್ತಿದ್ದನೆಂಬ ಉಲ್ಲೇಖ ಕಾಣಸಿಗುತ್ತದೆ. ಅವರವಾಡಿ ೭೦೦, ಬೋಧನ ೭೦೦, ಸಕ್ಕರಗೆ ೮೦, ಸವರವಳ್ಳಿ ಕಂಪಣ ೨೪ ಮೊದಲಾದ ರಾಜಕೀಯ ವಿಭಾಗಗಳು ಉಪವಿಭಾಗಗಳು ಎರಡಿರ್ಛಾಸಿರ ಬಾಡದಲ್ಲಿ ಸಮಾವೇಶಗೊಂಡಿದ್ದವು. ಈ ವಿಭಾಗಕ್ಕೆ ರಾಜಧಾನಿಯಾಗಿ 'ಅಮರಾವತೀಪುರ (ಅಂದರೆ ಇಂದಿನ ದೇಗಲೂರು ಯಾ ದೆಗ್ಲೂರ್) ಇದ್ದಿರಬೇಕು. ಆದ್ದರಿಂದಲೇ ಮಹಾಮಂಡಳೇಶ್ವರ ಎರೆಮರಸನನ್ನು ಅಮರಾವತಿಪುರವರೇಶ್ವರ ಎಂದು ಕರೆಯಲಾಗಿದೆ.

ತೇದಿ ಇಲ್ಲದ ನಾರಂಗಲ್ ಶಾಸನದಲ್ಲಿಯೂ ಅಮರಾವತಿಪುರದ ಉಲ್ಲೇಖ ಬಂದಿದೆ. ಇಲ್ಲಿನ ಬಿರುದಾವಳಿಗಳು ಮಹಾ ಮಂಡಳೇಶ್ವರ ಎರೆಯಮರಸನಿಗೆ ಸಂಬಂಧಿಸಿದವು. ಅಮರಾವತೀಪುರದ ಉಲ್ಲೇಖವನ್ನು ಹೊತ್ತ ನಾಲ್ಕು ಶಾಸನಗಳಲ್ಲಿ ಮೂರು ದೇಗಲೂರು ತಾಲೂಕಿಗೆ ಸಂಬಂಧಿಸಿದವು. ಮೇಲಿನ ಶಾಸನಗಳ ಆಧಾರದಿಂದ ನಾವು ಈ ಕೆಳಗಿನ ನಿರ್ಣಯಗಳಿಗೆ ಬರಬಹುದು.

* ಇಂದಿನ ದೆಗ್ಲೂರ್‌ಗೆ ಹಿಂದೆ ದೇಗಲೂರು ಎಂಬ ಹೆಸರಿತ್ತು. ಅದನ್ನು ಅಮರಾವತೀಪುರ ಎಂದೂ ಕರೆಯಲಾಗುತ್ತಿತ್ತು.
* ಶಾಸನಕಾರರು ದೇಗಲೂರನ್ನು ಅಮರಾವತೀಪುರ ಎಂದೇ ಕರೆದರು. ಅದಕ್ಕೆ ಅವರ ಸಂಸ್ಕೃತ ಪ್ರೇಮವೇ ಕಾರಣ.
* ಕರ್ಕಪರಸ, ಎರೆಯಮರಸ, ಕಾಳಿಮಯ್ಯ ಮೊದಲಾದ ದಂಡನಾಯಕರು, ಮಹಾಮಂಡಳೇಶ್ವರರು ಈ ಭಾಗದಲ್ಲಿ ಕಲ್ಯಾಣದ ಚಾಲುಕ್ಯರ ಸಾಮಂತರಾಗಿ ಆಡಳಿತ ನಡೆಸಿದರು. ಇವರೆಲ್ಲ ಕನ್ನಡಿಗರೇ ಆಗಿದ್ದರು.
* ದೇಗಲೂರಿನಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡವು. ವಾಜಿವಂಶದ ವೀರನಾದ ನಾಗವರ್ಮ ಸಂಧ್ಯಾಮಠ, ಬಾಗಿಲ್ವಾಡ, ಘಳಿಗೆ, ಗಣಪತಿ, ಭಗವತೀ ಸಪ್ತಮಾತ್ರಿಕೆ, ನಂದಿ, ನಾಗರ ಹೀಗೆ ಹತ್ತಾರು ದೇಗುಲಗಳನ್ನು ಪ್ರತಿಷ್ಠಾಪಿಸದ.
* ವಾಜಿವಂಶದ ಮತ್ತೊಬ್ಬ ವೀರನಾದ ರೇವಣಯ್ಯ ನಾಯಕನು ರೇವಣೇಶ್ವರ ದೇವಾಲಯವನ್ನು ಕರಡಿಕಲ್ಲಿನಲ್ಲಿ ಕಟ್ಟಿಸಿದನು.
* ಕರ್ಕಪರಸನ ದಂಡನಾಯಕನೊಬ್ಬ ಕರಡಿಕಲ್ಲಿನಲ್ಲಿ ಜಿನಾಲಯವೊಂದನ್ನು ಕಟ್ಟಿಸಿದ ವಿವರ ಶಾಸನದಿಂದ ತಿಳಿದುಬರುತ್ತದೆ.

ಹೀಗೆ ಅನೇಕ ದೇಗುಲಗಳು ಈ ಪ್ರದೇಶದಲ್ಲಿ ತಲೆ ಎತ್ತಿದವು. ಆದ್ದರಿಂದ ಇದು ದೇವಕುಲಗಳ, ದೇಗುಲಗಳ ಊರಾಯಿತು.

- ದೇವಾಲಯಗಳಿಂದ ಕೂಡಿದ ಈ ಊರು ಅಂದು ಸಾಂಸ್ಕೃತಿಕ ಕೇಂದ್ರವಾಗಿಯೂ ಹೆಸರು ಮಾಡಿರಬೇಕು. ಆದ್ದರಿಂದ ಸಹಜವಾಗಿಯೇ ಆ ಊರಿನ ಹೆಸರು ಶಾಸನಗಳಲ್ಲಿಯೂ ದಾಖಲಾಯಿತು. ರಾಜ ಮಹಾರಾಜರ, ಅವರ ಸಾಮಂತರ ಗಮನವೆಲ್ಲ ಸಹಜವಾಗಿಯೇ ದೇಗಲೂರಿನ ಕಡೆಗೆ ಹರಿಯಿತು.
- ದಾಖಲೆಗಳ ಕುರಿತು ಶೋಧ ನಡೆಸಿದ ಡಾ. ಹಂಪನಾ ಅವರು "ಅಮರಾವತೀಪುರವೆಂಬುದು ಪ್ರಾಯಃ ನಾಂದೇಡ್ ಜಿಲ್ಲೆಯ ದೇಗಲೂರೇ ಇರಬೇಕು. ದೇಗುಲಗಳ ಊರು ದೇಗಲೂರು. ದೇಗಲೂರು ಎಂಬುದರ ಸಂಸ್ಕೃತೀಕರಣಗೊಳಿಸಿದ ರೂಪ ಅಮರಾವತೀಪುರ ಎಂದು ನನಗೆ ತೋರುತ್ತದೆ" ಎಂದಿದ್ದಾರೆ. ದೇವಕುಲದ ತದ್ಭವ ರೂಪ 'ದೇಗುಲ' ಎಂಬುದು ಗಮನೀಯ ಅಂಶ. ಮಹಾರಾಷ್ಟ್ರದಲ್ಲಿ ಪ್ರಾಚೀನಕಾಲದಲ್ಲಿ ಊರ ಹೆಸರುಗಳು ಕನ್ನಡದಲ್ಲಿದ್ದು ಅನಂತರ ಅವು ಸಂಸ್ಕೃತೀಕರಣಗೊಂಡ ಅನೇಕ ಉಲ್ಲೇಖಗಳು ಶಾಸನಗಳಲ್ಲಿ ಲಭ್ಯವಾಗಿವೆ. ಉದಾ: ೧೩೧೭ರ ಉಸ್ಮಾನಾಬಾದ್ ಜಿಲ್ಲೆಯ ತುಳಜಾಪುರ ತಾಲೂಕಿನ ಇಟ್ಕಲ್ ಶಾಸನದಲ್ಲಿ "ಎತ್ತಿನೂರ ಲಿಂಗಾಪುರವೆಂದು ವಿಖ್ಯಾತಿಯಂ ಮಾಡಿದ" ಉಲ್ಲೇಖವಿದೆ. ಎತ್ತಿನೂರು ಲಿಂಗಾಪುರವಾದಂತೆ ದೇಗಲೂರು ಅಮರಾವತೀಪುರವಾಗಿ ಮಾರ್ಪಟ್ಟಿರಬೇಕು.

ದೇಗಲೂರು ಈ ಪದದಲ್ಲಿನ ವಾರ್ಗಿಕ "ಊರು" ಕನ್ನಡ ಪದ. ಅಂದಿನ ದೇವಕುಲದ ಊರು-ದೇಗುಲಗಳ ಊರು-ದೇಗಲೂರು-ದೆಗ್ಲೂರ್ ಆದಾಗಲೂ ಅದರ ಅಂತ್ಯದ ವಾರ್ಗಿಕ ಯಥಾವತ್ತಾಗಿ ಇಂದಿಗೂ ಉಳಿದುಕೊಂಡು ಬಂದಿದೆ. ಸ್ಥಳನಾಮಗಳು ಸಂಸ್ಕೃತಿಯ ಪಳೆಯುಳಿಕೆಯಂತೆ ಜೀವಂತವಾಗಿರುತ್ತವೆಂಬುದಕ್ಕೆ 'ದೆಗ್ಲೂರು' ಒಂದು ಉತ್ತಮ ನಿದರ್ಶನವಾಗಿದೆ.

ವಿದ್ವಾಂಸರು, ಕವಿಗಳು, ಅಧಿಕಾರದ ಚುಕ್ಕಾಣಿ ಹಿಡಿದವರು ಈ ಸ್ಥಳನಾಮಗಳನ್ನು ಸಂಸ್ಕೃತೀಕರಣಗೊಳಿಸುವ ಪ್ರಯತ್ನ ಮಾಡಿದರು. ಈ ಬದಲಾವಣೆಯನ್ನು ಜನತೆ ಅಷ್ಟಾಗಿ ಒಪ್ಪಿಕೊಳ್ಳಲಿಲ್ಲ. ಅಧಿಕಾರಯಂತ್ರ ತಂದ ಬದಲಾವಣೆಯನ್ನು ಜನ ಗಮನಿಸದೇ ತಲತಲಾಂತರದಿಂದ ರೂಢಿಯಲ್ಲಿ ಬಂದ ಹೆಸರನ್ನೇ ಅವರು ಚಾಲ್ತಿಯಲ್ಲಿಟ್ಟುಕೊಂಡು ಬಂದರು. ಆದ್ದರಿಂದ ಶಾಸನಕಾರರು ದೇಗಲೂರನ್ನು ಅಮರಾವತೀಪುರ ಎಂದು ಕರೆದರೂ ಜನರೆಲ್ಲ ದೇಗಲೂರು ಹೆಸರನ್ನು ಉಳಿಸಿಕೊಂಡೇ ಮುನ್ನಡೆದರು.

'ಊರು' ಎಂಬ ವಾರ್ಗಿಕದಿಂದ ಅಂತ್ಯವಾಗುವ ನೂರಾರು ಸ್ಥಳನಾಮಗಳು ಗೋದಾವರಿ ನರ್ಮದಾ ನದಿಯವರೆಗೂ ಕಾಣಸಿಗುತ್ತವೆ. ಇವೆಲ್ಲ ಕನ್ನಡಿಗರು ಇಟ್ಟ ಹೆಸರು, ಅವರಿಟ್ಟ ಹೆಸರು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ. ಸುಮಾರು ಒಂದು ಸಾವಿರ ವರ್ಷಗಳ ಇತಿಹಾಸವಿರುವ ದೇಗಲೂರು, ಕನ್ನಡ ಸಂಸ್ಕೃತಿ ಈ ಭಾಗದಲ್ಲಿ ತಲೆಯೆತ್ತಿ ಮೆರೆದಿತ್ತೆಂಬುದನ್ನು ಶ್ರುತಪಡಿಸುತ್ತದೆ.

**ಟಿಪ್ಪಣಿಗಳು**

೧. Inscriptions from Nanded District ಎಂಬ ಕೃತಿಯಿಂದ ಈ ಶಾಸನಗಳನ್ನು ಆಯ್ದುಕೊಳ್ಳಲಾಗಿದೆ. ಡಾ. ಶ್ರೀನಿವಾಸರಿತ್ತಿ ಹಾಗೂ ಜಿ.ಸಿ. ಶೇಳಕೆ ಅವರು ಈ ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ್ದಾರೆ.

೨. ಅದೇ. ನಂ. ೬

೩. ಅದೇ. ನಂ. ೮

೪. ಅದೇ ನಂ.೩

೫. ಅದೇ ನಂ ೨೩

೬. ಅದೇ ನಂ ೨೯

೭. ಅದೇ ನಂ ೨೬

೮. ಡಾ. ಹಂಪನಾ, ಶಾಸನಗಳಲ್ಲಿ ಎರಡು ವಂಶಗಳು. ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿವಿ.೧೯೯೫

೯. ನಾಗರಾಜರಾವ್ ಎಂ. ಎಸ್. ಸಿದ್ದರಾಮನ ಎರಡು ಶಾಸನಗಳು, ಕರ್ನಾಟಕ ಭಾರತಿ, ಸಂಪುಟ ೩ ಸಂಚಿಕೆ ೪ ಕರ್ನಾಟಕ ವಿವಿ ಧಾರವಾಡ.

೧೦. ಜೋಶಿ. ಶಂಭಾ: ಎಡೆಗಳು ಹೇಳುವ ಕಂನಾಡ ಕತೆಗಳು, ಧಾರವಾಡ ೧೯೪೭

# ತಿಂಥಿಣಿ ಮೌನೇಶ್ವರ ಗುಡಿ ಕಟ್ಟಿಸಿದವರು ಯಾರು?

● ವೀರಣ್ಣ ದಂಡೆ

ಕಲಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನ ಗೋನಾಳದ ವಿಶ್ವಕರ್ಮ ಸಮಾಜಕ್ಕೆ ಸೇರಿದ ಮೋನಪ್ಪನು ಯೋಗಿಯಾಗಿ ಅಧ್ಯಾತ್ಮ ಜೀವಿಯಾಗಿ ದೇಶಸಂಚಾರ ಮಾಡುತ್ತ ಜನರಲ್ಲಿ ಅರಿವು ಮೂಡಿಸುತ್ತ ತಿರುಗಿದನು. ತಿಂಥಿಣಿ ಗ್ರಾಮದಲ್ಲಿ ತನ್ನ ಕೊನೆಯ ದಿನಗಳನ್ನು ಕಳೆದನು.

ಸುರಪುರ ತಾಲೂಕಿನ ತಿಂಥಿಣಿ ಗ್ರಾಮವು ಮೌನೇಶ್ವರನಿಂದಲೇ ಪ್ರಸಿದ್ಧಿ ಪಡೆದಿದೆ. ೧೨ನೇ ಶತಮಾನದ ವೀರಶೈವ ಶರಣರ ಪ್ರಭಾವಕ್ಕೆ ಒಳಗಾದ, ಬಸವಣ್ಣ(ಕೊಡಕಲ್ಲ ಬಸವಣ್ಣ) ಎಂಬ ಅಂಕಿತನಾಮದಿಂದ ವಚನಗಳನ್ನು ರಚಿಸಿದ. ಮೌನೇಶ್ವರನು ವಿಶ್ವಕರ್ಮ ಸಮಾಜಕ್ಕೆ ಸೇರಿದ ಒಬ್ಬ ಯೋಗಿಯಾಗಿದ್ದಾನೆ. ಈತನು ಬದುಕಿದ್ದ ೧೬ನೇ ಶತಮಾನ, ಬಿಜಾಪುರದ ಮುಸ್ಲಿಮರ ಪ್ರಭಾವ ವಿಪರೀತವಾಗಿದ್ದ ಕಾಲ. ಹಿಂದೂ-ಮುಸ್ಲಿಮರಲ್ಲಿ ಆ ಕಾಲಕ್ಕೆ ಸಾಮರಸ್ಯವಿರಲಿಲ್ಲವೆಂದು ತೋರುತ್ತದೆ. ಅದಕ್ಕಾಗಿ ಮೌನೇಶ್ವರರು ಮುಖ್ಯವಾಗಿ ಧರ್ಮಸಮನ್ವಯದ ಪ್ರಚಾರವನ್ನು ಕೈಗೊಂಡ ಗುರುತುಗಳು ಅವರ ವಚನಗಳಲ್ಲಿ ಕಾಣಸಿಗುತ್ತವೆ.

ಈತ ಹಿಂದೂ-ಮುಸ್ಲಿಮರ ಐಕ್ಯತೆಗಾಗಿ ಶ್ರಮಿಸಿದುದರಿಂದ ತಿಂಥಿಣಿಯಲ್ಲಿಯ ಇವನ ಗುಡಿಯೂ ಹಿಂದೂ-ಮುಸ್ಲಿಮ ಸಾಮರಸ್ಯದ ಪ್ರತೀಕವಾಗಿಯೇ ನಿರ್ಮಾಣಗೊಂಡಿದೆ. ಗರ್ಭಗುಡಿಯಲ್ಲಿ ಎರಡು ಅಂತಸ್ತುಗಳಿದ್ದು, ಕೆಳಗಿನ ಗರ್ಭಗುಡಿಯಲ್ಲಿ ಮೌನೇಶ್ವರನ ಮೂರ್ತಿ ಮತ್ತು ಅವನು ಬಳಸಿದನೆನ್ನಲಾದ ಹೂಜಿ, ಚಪ್ಪಕೊಡಲಿ ಮುಂತಾದವುಗಳಿದ್ದರೆ, ಗರ್ಭಗುಡಿಯ ಮೇಲಿನ ಇನ್ನೊಂದು ಅಂತಸ್ತಿನಲ್ಲಿ ಮಚಾರ ಇದೆ. ಇದನ್ನು ಮೋಹಿನುದ್ದೀನನ ಮಚೇರಿ ಎಂದು ಕರೆಯಲಾಗುತ್ತದೆ. ಹಿಂದೂಗಳು ಗುಡಿ ಎಂದು ಕರೆದರೆ, ಮುಸ್ಲಿಮರು ಮೋನಪ್ಪನ ದರ್ಗಾ ಎನ್ನುತ್ತಾರೆ.

ಹೀಗೆ ಮೌನೇಶ್ವರನು ತನ್ನ ಕಾಲದಲ್ಲಿ ಕಾಣಿಸಿಕೊಂಡಿದ್ದ ಹಿಂದೂ-ಮುಸ್ಲಿಮರ ನಡುವಿನ ಬಿರುಕನ್ನು ಮುಚ್ಚಿಹಾಕಲು ಪ್ರಯತ್ನಿಸಿದರೆ, ಅವನ ಗುಡಿ-ದರ್ಗಾ ನಿರ್ಮಿಸಿದವರು ಕೂಡ ಅದೇ ದೃಷ್ಟಿ-ಧೋರಣೆಯನ್ನು ಹೊಂದಿದವರೆಂಬುದು ಆ ಗುಡಿಯ ರಚನೆ ನೋಡಿದರೆ ನಮಗೆ ತಿಳಿದು ಬರುತ್ತದೆ. ಹಿಂದೂ-ಮುಸ್ಲಿಮ ಸಾಮ್ಯರಸ್ಯದ ಪ್ರತೀಕವಾಗಿಯೇ ಈ ಗುಡಿಯ

ರಟಿನ ಕಾಣುವಂತಿರಲು ಕಳಸದ ಜೊತೆಗೆ ಮಾಳಿಗೆಯ ಸುತ್ತೂ ನಾಲ್ಕು ಮೂಲೆಯಲ್ಲಿ ಸಣ್ಣ ಮೀನಾರುಗಳನ್ನು ಕಟ್ಟಿದ್ದು, ಅವುಗಳಿಗೆ ಚಾಂದ್ ಜೋಡಿಸಲಾಗಿದೆ. ಇಂತಹ ವಿಶಿಷ್ಟವಾದ, ಧರ್ಮ ಸಮನ್ವಯದ ದೃಷ್ಟಿಯಿಂದ ಕೂಡಿದ ಮೌನೇಶ್ವರ ಗುಡಿ ಯಾರು ಕಟ್ಟಿಸಿದರು ಎಂಬುದೊಂದು ಮುಖ್ಯವಾದ ಶೋಧವೆನಿಸುತ್ತದೆ.

ಸುರಪುರ ತಾಲೂಕದಲ್ಲೆಲ್ಲಾ ಜನಜನಿತವಾದ ಸಂಗತಿಯೆಂದರೆ ಸುರಪುರದ ವಿಶ್ವಕರ್ಮ ಕುಟುಂಬಕ್ಕೆ ಸೇರಿದ ಶೆಟ್ಟೆಸೊಲಬಣ್ಣಾ ಎನ್ನುವವನು ಈ ಗುಡಿ ಕಟ್ಟಿಸಿದನೆಂಬುದು. ಈ ಕುರಿತು ಅನೇಕ ದಂತಕಥೆಗಳು, ಜನಪದ ಹಾಡುಗಳೂ ಸಗರನಾಡಿನಲ್ಲಿ ಪ್ರಚಾರದಲ್ಲಿವೆ. ಶೆಟ್ಟಿ ಸೊಲಬಣ್ಣಾನು ಒಂದು ದಿನ ಮಲಗಿದ್ದಾಗ ಕನಸಿನಲ್ಲಿ ಮೌನೇಶ್ವರ ಬಂದು ತನ್ನ ಗುಡಿ ಕಟ್ಟಲು ಹೇಳಿದನಂತೆ. ಇದರಿಂದಾಗಿ ಸೊಲಬಣ್ಣಾನು ತನ್ನ ಮಂಚದ ಎರಡು ಬಂಗಾರದ ಕಾಲುಗಳನ್ನು ಮಾರಿ ಮೌನೇಶ್ವರರ ಗುಡಿ ಕಟ್ಟಿಸಿದನೆಂದು ಒಂದು ಕಥೆ ಸಗರನಾಡಿನಲ್ಲಿ ಜನಜನಿತವಾಗಿದೆ. ಈ ಕಥೆ, ಹಾಡಿನ ರೂಪದಲ್ಲೂ ಪ್ರಚಾರದಲ್ಲಿದೆ. ಮೌನೇಶ್ವರರ ಬಗ್ಗೆ ಪಿಎಚ್.ಡಿ. ಅಧ್ಯಯನ ಮಾಡಿದ ಡಾ. ಎಂ.ಎಂ. ಪಡಸೆಟ್ಟಿ ಅವರು ಅಂತಹ ಒಂದು ಹಾಡನ್ನು ಸಂಗ್ರಹಿಸಿಕೊಡುತ್ತಾರೆ. ಶೆಟ್ಟಿ ಸೊಲಬಣ್ಣಾನ ಗದ್ದುಗೆ ಮೌನೇಶ್ವರರ ಗುಡಿಯ ಹತ್ತಿರವಿರುವುದನ್ನು, ಜಾತ್ರೆಯ ಕಾಲಕ್ಕೆ ಪುರವಂತರು ಸೊಲಬಣ್ಣಾನ ಸೇವೆ ಸಲ್ಲಿಸುವುದನ್ನು ಗುರುತಿಸುವ ಡಾ. ಪಡಶೆಟ್ಟಿ ಅವರು, ಪುರವಂತರು ಹಾಡುವ ಒಂದು ಹಾಡನ್ನು ಉಲ್ಲೇಖಿಸುತ್ತಾರೆ. ಆ ಹಾಡಿನ ಆಯ್ದ ಸಾಲುಗಳು ಹೀಗಿವೆ.

ಸುರಪುರ ಗ್ರಾಮದಲಿ ದೊರೆಯಿದ್ದನು ಹಿಂದಿನ ಕಾಲದಲ್ಲಿ
ಬಂಗಾರ ಕೊಟ್ಟಿದ್ದನು ಸೊಲಬಣ್ಣಾ ಕೈಯಲ್ಲಿ
ನಾಲ್ಕು ಮಂಚದ ಕಾಲಬೇಕೆಂದಾನು ಅಲ್ಲಿ ।

ಬಂಗಾರವನ್ನು ತಂದು ಸೊಲಬಣ್ಣಾನು ಮಲಗಿದನಂದು
ಮೌನ ಸದ್ಗುರುವರ ಸ್ವಪ್ನದಲ್ಲಿ ಬಂದು
ಅರ್ಧ ಬಂಗಾರ ಮಾರಿ ಗುಡಿಕಟ್ಟಿಸೆಂದನು ।

ಕೃಷ್ಣಾ ನದಿಯ ದಂಡೆಯಲ್ಲಿ ಮೌನೇಶ್ವರನ ಗುಡಿ ಕಟ್ಟಿಸಿ, ತಿಂಥಿಣಿ ಮೌನಪ್ಪನ ಪಾದ ಸನ್ನಿಧಿಯಲ್ಲಿ ಸುರಪುರ ಸೊಲಬಣ್ಣಾನು ಐಕ್ಯವಾದನು. ಇಲ್ಲಿ ದಿನಾಂಕ ೨೩-೦೨-೧೯೮೬ರ ಸಂಯುಕ್ತ ಕರ್ನಾಟಕದಲ್ಲಿ ಡಾ. ವಿ. ಶಿವಾನಂದ ಅವರು ಒಂದು ತಾಮ್ರಶಾಸನವನ್ನು ಬೆಳಕಿಗೆ ತಂದಿದ್ದು, ಅದು ಕೂಡ ಜನಪದರಲ್ಲಿರುವ ಸಂಗತಿಯನ್ನೆ ಅನುಮೋದಿಸುತ್ತದೆ.

ಈ ಶಾಸನದ ಕಾಲ ಕ್ರಿ.ಶ. ೧೭೨೭. ಆಗಿನ ಕಾಲದಲ್ಲಿ ಅರ್ಚಕರಾದ ದೊಡ್ಡಯ್ಯ-ಈರಯ್ಯ ಎಂಬುವವರು ಸುರಪುರ ವಿಶ್ವಕರ್ಮ ಸೊಲಬಣ್ಣಾನಿಗೆ ಕರಾರು ಶಾಸನ ಹಾಕಿ ಕೊಡುತ್ತಾರೆ. ಈ ಶಾಸನದನ್ವಯ ಶೆಟ್ಟಿ ಸೊಲಬಣ್ಣಾ ಎನ್ನುವವನು ಮೌನಪ್ಪನ ಗುಡಿ ಕಟ್ಟಿಸಿದನೆಂದು ತಿಳಿದು ಬರುತ್ತದೆ.

"ರಾ॥ ಸೊಲಬಣ್ಣಾ ಮಡಿಕೇಶ್ವರ ಸಂಸ್ಥಾನ ಸುರಪುರಯಿ
ಶಕೆ ೧೬೪೯ ಪ್ಲವಂಗನಾಮ ಸಂವತ್ಸರ ಮಾರ್ಗ
ಶಿರಶುದ್ಧ ೩ ಗುರುವಾರಕ್ಕೆ ನೀವು ಮೊದಲು ಮೌನೇಶ್ವ

ಯಾರು ಕಟ್ಟಿಸಿದರು ಎಂಬುದು ನನಗೆ ತಿಳಿದಿಲ್ಲ. ನೀವು ವೀರಯ್ಯ ಅವರನ್ನು ಕೇಳಬಹುದು' ಎಂದು, ಅಲ್ಲಿಯೇ ಸ್ವಲ್ಪ ದೂರದಲ್ಲಿ ಒಂದು ಅಂಗಡಿಯಲ್ಲಿ ಕುಳಿತಿದ್ದವರ ಕಡೆ ಬೆರಳು ಮಾಡಿ ತೋರಿಸಿದ. ಈ ವೀರಯ್ಯಾಸ್ವಾಮಿ ಮೌನೇಶ್ವರನ ಈಗಿನ ಮುಖ್ಯ ಅರ್ಚಕರೆಂಬುದು ಅವರನ್ನು ಮಾತನಾಡಿಸಿದಾಗ ತಿಳಿಯಿತು.

ಮೊದಲಿನವರು ಹೇಳಿದ ಮಾತುಗಳನ್ನು ಮನದಲ್ಲಿಟ್ಟುಕೊಂಡು, ವೀರಯ್ಯಾಸ್ವಾಮಿ ಅವರನ್ನು ಕಂಡು, ಗುಡಿಯ ಕಟ್ಟಡದ ಪ್ರಸ್ತಾಪ ಮಾಡಿದೆ. ಅವರು - 'ಸೊಲಬಣ್ಣನೆಂಬುವನು ಈ ಗುಡಿ ಕಟ್ಟಿಸಿದನೆಂದು ಹಿರಿಯರು ಹೇಳುವುದನ್ನು ಕೇಳಿದ್ದೇನೆ' ಎಂದರು. ತಾಮ್ರಶಾಸನದ ಸಂಗತಿ ಪ್ರಸ್ತಾಪಿಸಿದಾಗ, ಅದರ ಬಗೆಗೆ ತಿಳಿದಿದ್ದ ಅವರು, 'ಅದು ಸೊಲಬಣ್ಣನ ವಂಶಜರ ಮನೆಯಲ್ಲಿದೆ' ಎಂದರು. ಡಾ. ಶಿವಾನಂದ ಅವರು ಪತ್ರಿಕೆಯಲ್ಲಿ ಅದನ್ನು ಪ್ರಕಟಿಸಿದ್ದ ಸಂಗತಿ ಅವರಿಗೆ ತಿಳಿದಿರಲಿಲ್ಲ. ಒಂದು ಪುಸ್ತಕದಲ್ಲಿ ನಿಷ್ಠಿ ವೀರಪ್ಪನವರು ಈ ಗುಡಿ ಕಟ್ಟಿಸಿದ ರೆಂದು ಬರೆದಿದೆಯೆಲ್ಲ-ಎಂದಾಗ, ವೀರಯ್ಯ ಥಟ್ಟನೆ 'ಅದು ನಿಜಸಂಗತಿ ಇರಬೇಕು' ತಾಮ್ರ ಶಾಸನವನ್ನು ಸೊಲಬಣ್ಣನ ವಂಶಜರು ನಂತರ ನಿರ್ಮಿಸಿರಬೇಕು ಎಂದು ನುಡಿದರು, ಜೊತೆಗೆ ತಮ್ಮಲ್ಲಿ ಕೆಲವು ಹಳೆಯ ಕಾಗದ ಪತ್ರಗಳಿದ್ದು ಅವನ್ನು ಪರಿಶೀಲಿಸಬಹುದೆಂದು ಮನೆಗೆ ಕರೆದೊಯ್ದರು.

ವೀರಯ್ಯ ಅವರು ತಮ್ಮಲ್ಲಿರುವ ಎಲ್ಲ ಹಸ್ತಪ್ರತಿಗಳ ಒಂದು ದೊಡ್ಡ ಗಂಟನ್ನು ನನ್ನ ಮುಂದೆ ತಂದಿಟ್ಟರು. ಅವನ್ನೆಲ್ಲ ಒಂದೊಂದಾಗಿ ಗಮನಿಸಿದೆ. ಅದರಲ್ಲಿ ಮೌನೇಶ್ವರ ಕೃತಿಗಳೇ ಜಾಸ್ತಿಯಾಗಿದ್ದವು. ಅದರಲ್ಲಿ ಒಂದು ಹಸ್ತಪ್ರತಿ ತೋರಿಸಿದ ವೀರಯ್ಯ ಅದನ್ನು ಕಕ್ಕೇರಿಯ ತಿಪ್ಪಣ್ಣಾಚಾರಿ ಅವರ ಮನೆಯಲ್ಲಿಯ ಹಸ್ತಪ್ರತಿಗಳಿಂದ ಅವರಿಂದಲೇ ನಕಲು ಮಾಡಿಸಿ ತಂದುದಾಗಿ ಹೇಳಿದರು. ಅಲ್ಲಿ ಮೌನೇಶ್ವರರ ಜನನ, ಆ ನಾಡಿನಲ್ಲಿರುವ ಶಿಲಾಶಾಸನಗಳು, ದ್ರವ್ಯ ಮುಂತಾದವುಗಳು ಇರುವ ಸ್ಥಳಗಳನ್ನು ಹೇಳಿ, ಮೌನೇಶ್ವರ ಗುಡಿಯ ವಿಷಯವನ್ನು ಹೀಗೆ ಬರೆಯಲಾಗಿತ್ತು:

"ಶ್ರೀ ತಿಂಥಿಣಿಯ ಸುತ್ತಣ ಉಗ್ರಾಣಗಳು ಮತ್ತು
ದ್ವಾರಬಾಗಿಲ ಅಂದರೆ ಮಹಾದ್ವಾರ ಸುರಪುರ
ಶ್ರೀ ಪಂಚಬ್ರಾಹ್ಮಣ ಸೊಲಬಣ್ಣನವರಿಂದ
ನಿರ್ಮಿತವಾಗಿದೆ"

ಈ ಸಾಲುಗಳು ಕಣ್ಣಿಗೆ ಬೀಳುತ್ತಲೆ, ಅಲ್ಲಿ ನನಗೆ ಭೇಟಿಯಾದ ಮೊದಲನೇ ವ್ಯಕ್ತಿ ಹೇಳಿದ ಮಾತುಗಳು ಥಟ್ಟನೆ ನೆನಪಾದವು. ಈಗ ಸೊಲಬಣ್ಣ ಕಟ್ಟಿಸಿದ್ದು ಏನು? ಎಂಬ ವಿಷಯ ಸ್ಪಷ್ಟವಾಗಿ ನಮ್ಮ ಗಮನಕ್ಕೆ ಬರುತ್ತದೆ. ಮುಖ್ಯ ಗುಡಿಯನ್ನು ವೀರಪ್ಪ ನಿಷ್ಠಿ ಕಟ್ಟಿಸಿದ್ದು, ಅದರ ಸುತ್ತಲಿನ ಆವಾರ, ಉಗ್ರಾಣ ಮತ್ತು ಮಹಾದ್ವಾರಗಳನ್ನು ಸೊಲಬಣ್ಣ ಕಟ್ಟಿಸಿದ್ದಾನೆ ಎಂಬುದನ್ನು ಈ ಎಲ್ಲ ಚರ್ಚೆಯ ಹಿನ್ನೆಲೆಯಲ್ಲಿ ಗ್ರಹಿಸಿಕೊಳ್ಳುವುದು ಸಾಧ್ಯ ವಾಗುತ್ತದೆ.

ಹೀಗಾಗಿ ಘರಮೂರ ಜಂಗನ ಅಭಿಪ್ರಾಯಕ್ಕೆ ಒಂದಲ್ಲ ಎರಡು ಸಾಕ್ಷಿಗಳು ಸಹಾಯಕ್ಕೆ

ಬರುವುದರಿಂದ ಇಬ್ಬರು ವ್ಯಕ್ತಿಗಳ ಹೆಸರುಗಳು ಒಂದೇ ಸಮಯದ ಸಂಗತಿಯೂ ತಿಳಿಯಾಗುತ್ತ ಬಂದು, ಆ ಇಬ್ಬರ ಪಾತ್ರವೇನೆಂಬುದನ್ನು ಕಕ್ಕೇರಿಯ ಮೂಲದ ಉಲ್ಲೇಖ ಸ್ಪಷ್ಟಪಡಿಸುವುದನ್ನು ಕಾಣುತ್ತೇವೆ. ಧರಮೂರ ಜಂಗಮ ೧೯೦೬ರ ಸುತ್ತಮುತ್ತಲ ವರ್ಷಗಳಲ್ಲಿ-ರಾಯಚೂರಿನ ಮೊದಲನೇ ಕಲೆಕ್ಟರನಾಗಿದ್ದನು. ಸುರಪುರ ದೇವರ ಸಂಸ್ಥಾನದ ಬಗ್ಗೆ ಅತ್ಯಂತ ಕುತೂಹಲ ತಾಳಿ ಬರವಣಿಗೆಗೆ ತೊಡಗಿದ್ದುದರಿಂದ ಸಹಜವಾಗಿಯೇ ಅತ ಕೆಲ ಮಹತ್ವದ ಕಾಗದ ಪತ್ರಗಳನ್ನು ನೋಡಿದ್ದಾನೆ. ೧೯೦೮ರಲ್ಲಿ ಸುರಪುರಕ್ಕೆ ಭೇಟಿ ಇತ್ತ ಜಂಗಮ, ಅಲ್ಲಿಯ ಇತಿಹಾಸದ ಬಗ್ಗೆ ಕುತೂಹಲ ತಾಳಿ, ಹಣಮ ಪಾಪಯ್ಯಶಾಸ್ತ್ರಿ ಎನ್ನುವವರಲ್ಲಿದ್ದ ಹಳೆಯ ದಾಖಲೆಗಳನ್ನು ಗಮನಿಸಿ ಈ ಪುಸ್ತಕವನ್ನು ಬರೆಯುತ್ತಿದ್ದೇನೆ ಎಂದು ಪ್ರಿಫೇಸಿನಲ್ಲಿ ಹೇಳಿಕೊಂಡಿದ್ದಾನೆ. ಹೀಗಾಗಿ ಮೌನೇಶ್ವರರ ಗುಡಿಯ ರಚನೆಯ ಸಂಗತಿಗೆ ಒಂದು ನಂಬಲರ್ಹ ಸಾಕ್ಷಿ ದೊರಕಿದಂತಾಗುತ್ತದೆ.

ಮೇಲಾಗಿ ಡಾ. ಶಿವಾನಂದ ಅವರು ಪ್ರಕಟಿಸಿದ ತಾಮ್ರಶಾಸನವನ್ನು ನೋಡಿದವರು, ಅದು ಇತ್ತೀಚಿನ ಶಾಸನವಾಗಿರುವ ಸಾಧ್ಯತೆ ಇದ್ದು, ಅದರ ಅಕ್ಷರಗಳು ಒಂದು ನೂರು ವರ್ಷದ ಹಳಮೆ ದಾಟುವುದಿಲ್ಲ ಎಂದು ಹೇಳುತ್ತಾರೆ. ತಾಮ್ರಶಾಸನದ ಕಾಲ ೧೭೩೭ ಎಂದಿದೆ. ನಿಟ್ಟಿ ಅವರು ಬದುಕಿದ ಕಾಲ ಈಗ ಗೊತ್ತಾಗಿರುವಂತೆ ೧೭೪೨-೧೮೦೨. ಹೀಗಾಗಿ ಕಾಲದ ವ್ಯತ್ಯಾಸವೂ ಇಲ್ಲಿ ಕಾಣುತ್ತದೆ. ಅದರೆ ಸುರಪುರ ಸಂಸ್ಥಾನದಲ್ಲಿ ಗೋಪಾಲಸ್ವಾಮಿ ಗುಡಿಯ ಕಟ್ಟಡವೇ ಮೊದಲು ಪ್ರಾರಂಭಗೊಂಡುದು. ಅದು ಪಿತಾಂಬರ ಬಹರಿ ಪಿಡ್ಡನಾಯಕನ ಕಾಲದಲ್ಲಿ (೧೭೦೭-೧೭೨೭). ಈತನು ೧೭೦೭ರಲ್ಲಿ ಸುರಪುರ ನಿರ್ಮಿಸಿ, ಗೋಪಾಲಸ್ವಾಮಿಯ ಗುಡಿ ಕಟ್ಟಲು ಪ್ರಾರಂಭಿಸಿದನು. ಆ ಗುಡಿ ಪೂರ್ಣಗೊಂಡದ್ದು ಮುಮ್ಮಡಿ ಪಾಮನಾಯಕನ ಕಾಲದಲ್ಲಿ (೧೭೪೨-೧೭೭೩). ಬಹುಶಃ ೧೭೬೦ರ ಸುತ್ತಮುತ್ತ ಇರಬೇಕು. ಈ ಅವಧಿಯಲ್ಲಿ ನಿಟ್ಟಿ ವೀರಪ್ಪ ಮುಖ್ಯಮಂತ್ರಿಯಾಗಿದ್ದನು.

ಇದೇ ಪಾಮನಾಯಕನ ಕಾಲದಲ್ಲಿಯೇ ಶೆಟ್ಟಿ ಸೋಲಬಣ್ಣ ಎಂಬ ಒಬ್ಬ ವ್ಯಕ್ತಿಯ ಉಲ್ಲೇಖ ದೊರೆಯುತ್ತದೆ. ಪಾಮನಾಯಕನ ಹೆಂಡತಿ ತಿಮ್ಮಮ್ಮ ದೇವದುರ್ಗದಾಕೆ. ಆಕೆಯ ತಂದೆಯು ಒಮ್ಮೆ ಅನಾರೋಗ್ಯದಿಂದ ಹಾಸಿಗೆ ಹಿಡಿದಾಗ-"ಪಾಮನಾಯಕನು ಶೆಟ್ಟಿ ಸೋಲಬಣ್ಣನಿಗೆ ರಾಜ್ಯದ ಹೊಣೆಹೊರಿಸಿ-ದೇವದುರ್ಗಕ್ಕೆ ಹೋಗಿ ಚಿಕಿತ್ಸೆ ಮಾಡಿಸಿದನು" ಎಂಬ ಉಲ್ಲೇಖ ದೊರೆಯುತ್ತದೆ. ಈ ಸೋಲಬಣ್ಣನೇ ಮೌನೇಶ್ವರ ಗುಡಿಯ ಆವಾರ, ಉಗ್ರಾಣ, ಮಹಾದ್ವಾರಗಳನ್ನು ಕಟ್ಟಿಸಿರಬೇಕೆನಿಸುತ್ತದೆ. ಈ ಊಹೆಗೆ ಕಾರಣ:

೧. ಸೋಲಬಣ್ಣ ರಾಜ್ಯಾಡಳಿತಕ್ಕೆ ಸಂಬಂಧಿಸಿದವನಾಗಿದ್ದಾನೆ.
೨. ೧೭೫೦ರ ಹಿಂದಿನ ಸುರಪುರದ ಇತಿಹಾಸ ತೀರ ಸಂಘರ್ಷಮಯವಾಗಿದೆ. ಸಾಂಸ್ಕೃತಿಕವಾಗಿ ಆ ಕಾಲದಲ್ಲಿ ಹೆಚ್ಚು ಕೆಲಸಗಳು ನಡೆದಿಲ್ಲ.
೩. ಸುರಪುರ ಸಂಸ್ಥಾನದ ಉಚ್ಛ್ರಾಯ ಕಾಲವೆಂದರೆ ೧೭೪೨-೧೮೦೨. ಈ ಅವಧಿಯಲ್ಲಿ ಮುಮ್ಮಡಿ ಪಾಮನಾಯಕ ಮತ್ತು ಇಮ್ಮಡಿ ವೆಂಕಟಪ್ಪ ನಾಯಕ ಆಳಿದರು. ನಿಟ್ಟಿ ಕಡಲೆಪ್ಪ ಮತ್ತು ವೀರಪ್ಪ ಮುಖ್ಯಮಂತ್ರಿಗಳಾಗಿದ್ದರು.

ಹೀಗಾಗಿ ತಾಮ್ರಶಾಸನದ ಸೃಷ್ಟಿ ಇಲ್ಲಿ ಸಂಪೂರ್ಣವಾಗಿ ಸಂಶಯಾಸ್ಪದವೆನಿಸುತ್ತದೆ. ಏನಿದ್ದರೂ ನಿಷ್ಠಿ ವೀರಪ್ಪ ಮತ್ತು ಶೆಟ್ಟಿ ಸೋಲಬಣ್ಣನ ಪ್ರದೇಶಗಳನ್ನು ಕಕ್ಕೇರಿ ದಾಖಲೆ ತಿಳಿಗೊಳಿಸುತ್ತದೆ, ಸ್ಪಷ್ಟವಾಗಿಸುತ್ತದೆ.

ನಿಷ್ಠಿಯವರು ಮೌನೇಶ್ವರನ ಗುಡಿಯನ್ನು ನಿರ್ಮಿಸಿದ್ದಾರೆ ಎಂಬುದಕ್ಕೆ ನಮಗೆ ಇನ್ನೊಂದು ಸಾಕ್ಷಿಯೂ ಅಲ್ಲಿ ಕಾಣ ಸಿಗುತ್ತದೆ. ವೀರಪ್ಪನವರು ಸಗರನಾಡಿನ ತುಂಬೆಲ್ಲ 'ಈಶ್ವರ ಗುಡಿ'ಗಳನ್ನು ನಿರ್ಮಿಸಿದ್ದು ಜನಜನಿತ ಸಂಗತಿಯಾಗಿದೆ. ನಾನಾ ಧರ್ಮೀಯರು ನಡೆದುಕೊಳ್ಳುವ ಈಶ್ವರ ಗುಡಿಯ ನಿರ್ಮಾಣವು ನಿಷ್ಠಿಯವರ ಸರ್ವಧರ್ಮ ಸಮನ್ವಯ ದೃಷ್ಟಿಯ ದ್ಯೋತಕವೆನ್ನಬೇಕು. ಈಗಲೂ ಈಶ್ವರನ ಗುಡಿಯೊಂದು ತಿಂಥಿಣಿ ಮೌನೇಶ್ವರನ ಗುಡಿಯ ಆವಾರದ ಬಲಮಗ್ಗಲು (ದಕ್ಷಿಣ ದಿಕ್ಕಿಗೆ) ಇರುವುದನ್ನು ಕಾಣಬಹುದಾಗಿದೆ. ಇದು ಮೌನೇಶ್ವರನ ಗುಡಿಯನ್ನು ನಿಷ್ಠಿಯವರೇ ಕಟ್ಟಿಸಿದ್ದಾರೆಂಬುದಕ್ಕೆ ಇನ್ನೊಂದು ಆಂತರಿಕದ ಸಾಕ್ಷಿಯಾಗಿ ನಿಲ್ಲುತ್ತದೆ. ಆ ಭಾಗದಲ್ಲಿ ನಿಷ್ಠಿಯವರು ನಿರ್ಮಿಸಿದ ಈಶ್ವರ ಗುಡಿಯಲ್ಲಿರುವ-ಸ್ಥಾವರಲಿಂಗ ಮತ್ತು ಬಸವಣ್ಣ (ಎತ್ತು)ನ ಮೂರ್ತಿಗಳೇ ಇಲ್ಲೂ ಇವೆ.

ಹಿಂದೂ-ಮುಸ್ಲಿಮ ಭಾವೈಕ್ಯತೆಯ ಸಂಕೇತವಾಗಿಯೇ ಮೋನಪ್ಪನ ಗುಡಿಯನ್ನು ಹಾಗೆ ಎರಡು ಗರ್ಭಗುಡಿಗಳನ್ನಾಗಿಸಿ-'ದರ್ಗಾ ಮತ್ತು ಗುಡಿ' ಎಂದು ಏಕಕಾಲಕ್ಕೆ ಕರೆಯುವಂತೆ ಮಾಡಿದ್ದಲ್ಲದೆ, ಈಶ್ವರನ ಗುಡಿಯೊಂದನ್ನು ದೇವಾಲಯದ ಆವಾರದ ಒಳಗಡೆಯೇ ನಿರ್ಮಿಸಿದ್ದು, ನಿಷ್ಠಿ ವೀರಪ್ಪ ಅವರ ಧರ್ಮಸಮನ್ವಯ ದೃಷ್ಟಿಗೆ ಸಾಕ್ಷಿಯಾಗಿ ನಿಲ್ಲುತ್ತದೆ.

ಸ್ಥಳೀಯವಾಗಿ ಮಹತ್ವ ಪಡೆದ ಒಂದು ಸಣ್ಣ ಸಂಗತಿಯ ಬಗ್ಗೆ ಪ್ರಚಲಿತವಾಗಿರುವ ಲಿಖಿತ ಮತ್ತು ಮೌಖಿಕ ಪರಂಪರೆಯ ಆಕರಗಳನ್ನು ಬಗೆದು ಗೈಯ್ಯುವ ಚರ್ಚೆ ಎಂತಹ ಕುತೂಹಲಕಾರಿಯಾಗಿರಬಲ್ಲದು ಎಂಬುದಕ್ಕೆ ಮೌನೇಶ್ವರನ ಗುಡಿ ಕಟ್ಟುವಿಕೆಯ ಸಂಬಂಧಿಸಿದ ಈ ಸಣ್ಣ ಸಂಗತಿ ಒಂದು ಉದಾಹರಣೆಯಾಗಬಲ್ಲುದಾಗಿದೆ.

### ಕೊನೆ ಟಿಪ್ಪಣಿಗಳು

೧. ಹಾಡಿದವರು: ಮಾನಪ್ಪ, ಪುರವಂತ ಸಾ। ಅಂಜುಟಗಿ, ತಾ। ಇಂಡಿ.

೨. ಉಲ್ಲೇಖ: ಎಂ.ಎಂ.ಪಡಶೆಟ್ಟಿ ತಿಂಥಣಿ ಮೋನಪ್ಪಯ್ಯ-ಒಂದು ಅಧ್ಯಯನ (೧೯೯೩), ಪು. ೧೭೭,.

೩. ಜನರು ಇಳಿದುಕೊಳ್ಳಲು, ಅಡುಗೆ ಮಾಡಿಕೊಳ್ಳಲು ಬೇಕಾಗುವ ಆಶ್ರಯಗಳು, ಕಮಾನಿನ ಆಕಾರದಲ್ಲಿ ಆವಾರ ಗೋಡೆಗೆ (ಕಂಪೌಂಡ್) ಹತ್ತಿಕೊಂಡಿವೆ.

೪. ಪ್ರೊ. ಕುಂಟೋಜಿ ಎನ್ನುವವರ ಹತ್ತಿರ ಈ ತಾಮ್ರಶಾಸನವಿತ್ತು. ಅದನ್ನೇ ತಮ್ಮ ಪಿಎಚ್.ಡಿ. ಮಾರ್ಗದರ್ಶಕರಾಗಿದ್ದ ಡಾ.ವಿ. ಶಿವಾನಂದ ಅವರಿಗೆ ಕೊಟ್ಟಿದ್ದರು. ಪ್ರೊ. ಕುಂಟೋಜಿ ಅವರು ಶಾಸನದ ಅಕ್ಷರಗಳು ಇತ್ತೀಚಿನವೆಂದು ಹೇಳುತ್ತಾರೆ.

೫. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ(೧೯೭೭) ಪು. ೧೦೯. ಮಂಜುನಾಥ ಪ್ರಕಾಶನ, ಬೆಂಗಳೂರು.

# 'ಪಾಟ್ಟು': ಮಲಯಾಳ ಕಾವ್ಯಮೀಮಾಂಸೆಯ ಗುರುತು

● ಮೋಹನ ಕುಂಟಾರ

ಹತ್ತನೆಯ ಶತಮಾನದವರೆಗೂ ಕೆಲವು ಜಾನಪದ ಗೀತೆಗಳಲ್ಲದೆ ಬೇರೆ ಸಾಹಿತ್ಯ ರಚನೆ ಮಲಯಾಳಂ ಭಾಷೆಯಲ್ಲಿ ಆಗಲಿಲ್ಲ. ಜಾನಪದ ಗೀತೆಗಳೇ ಮುಂದಿನ ಸಾಹಿತ್ಯ ರಚನೆಗೆ ಪ್ರೇರಣೆ ನೀಡಿವೆಯೆಂಬುದು ಸ್ಪಷ್ಟವಾಗುತ್ತದೆ. ಹನ್ನೆರಡನೆಯ ಶತಮಾನದಿಂದೀಚೆಗೆ ಪ್ರಾರಂಭವಾದ ಹೊಸ ಸಾಹಿತ್ಯವನ್ನು ಪಾಟ್ಟು ಸಾಹಿತ್ಯವೆಂದು ಕರೆಯಲಾಗುತ್ತದೆ. ಪಾಟ್ಟು ಎಂದರೆ ಗಾನ ಅಥವಾ ಹಾಡು. ಲೀಲಾತಿಲಕಂ ಗ್ರಂಥದಲ್ಲಿ ಪಾಟ್ಟು ಸಾಹಿತ್ಯದ ಲಕ್ಷಣವನ್ನು ಈ ರೀತಿ ವಿವರಿಸಿದ್ದಾರೆ.

ದ್ರಮಿಡ ಸಂಘಾತಾಕ್ಷರ ನಿಬದ್ಧಮೆತುಕಾ
ಮೋನ ವೃತ್ತ ವಿಶೇಷಯುಕ್ತಂ

ತಮಿಳು ಅಕ್ಷರಗಳಿಂದ ಮಾತ್ರ ಬರೆಯುವ ಪದಗಳನ್ನು ಬಳಸಿ 'ಎತುಕ' ಮತ್ತು 'ಮೋನ' ಎಂಬ ಪ್ರಾಸಗಳಿಂದ ಕೂಡಿದ ವೃತ್ತ ವಿಶೇಷಕ್ಕೆ ಪಾಟ್ಟು ಎಂದು ಹೆಸರು. ಎತುಕ ಎಂದರೆ ದ್ವಿತೀಯ ಅಕ್ಷರ ಪ್ರಾಸ. ಮೋನ ಎಂದರೆ ಆದಿ ಪ್ರಾಸ. ಪ್ರತಿಯೊಂದು ಪಾದದ ಆದ್ಯಕ್ಷರಗಳು ಸಜಾತೀಯವಾಗಿರಬೇಕು. ಇದನ್ನು ಮೋನ ಎನ್ನುವರು. ವೃತ್ತದ ಮೊದಲನೆಯ ಭಾಗದ ದ್ವಿತೀಯಾಕ್ಷರ ಮತ್ತು ಎರಡನೆಯ ಭಾಗದ ದ್ವಿತೀಯಾಕ್ಷರಗಳು ಸಮಾನವಾಗಿರಬೇಕು. ಈ ಪಾಟ್ಟು ಮಲಯಾಳಂ ಭಾಷಾ ಕಾವ್ಯರೀತಿಯೆಂಬುದು ಸ್ಪಷ್ಟ. ಇಲ್ಲಿ ತಮಿಳು ಮಲಯಾಳಂ ಯೋಗವೆಂಬ ಎತುಕ, ಮೋನ ಇವು ತಮಿಳಿನ (ಎದುಗೈ, ಮೋನೈ) ಪರಿಭಾಷೆಗಳು. ಸಂಸ್ಕೃತದಲ್ಲಿರುವ ಆದಿಪ್ರಾಸ-ಅಂತ್ಯಪ್ರಾಸ ಮೊದಲಾದವುಗಳ ಪರ್ಯಾಯ ಪರಿಭಾಷೆಗಳು. ಆಗ ಭಾಷಾ ಸಂಸ್ಕೃತಯೋಗವಾದ ಮಣಿಪ್ರವಾಳವೂ ಭಾಷಾ ತಮಿಳು ಯೋಗವಾದ ಮಣಿಪ್ರವಾಳವೂ ಅಸ್ತಿತ್ವದಲ್ಲಿದ್ದವೆಂದು ಒಪ್ಪಿಕೊಳ್ಳಬಹುದು. ಇವೆರಡೂ ಅಲ್ಲದ ಜನರ ಮೌಖಿಕ ಪರಂಪರೆಯೂ ಅಸ್ತಿತ್ವದಲ್ಲಿತ್ತು. ಈ ಜನಪದ ಸಾಹಿತ್ಯ ಎಳುತ್ತಚ್ಛನ್, ಚೆರುಶ್ಶೇರಿ ಮೊದಲಾದವರಿಗೂ ಪೂರ್ವದಲ್ಲಿಯೇ ಪ್ರಚಾರದಲ್ಲಿತ್ತು. ಅದು ಜನಪದ ಕತೆ, ಹಾಡು (ವಡಕನ್ ಪಾಟ್ಟು, ತೆಕ್ಕನ್ ಪಾಟ್ಟು) ಗಾದೆಗಳು ಇತ್ಯಾದಿಗಳೆಲ್ಲವನ್ನು ಒಳಗೊಂಡಿತ್ತು. ಊರಾಳರ್, ಪಣಿಯಾರ್ ಮೊದಲಾದ ಗಿರಿಜನರು ಮಾತ್ರವಲ್ಲದೆ ಸಮಾಜದ ಮೇಲುವರ್ಗದವರೂ ಈ ಭಾಷೆಯನ್ನೆ

ಅವಲಂಬಿಸಿದ್ದರು, ಪೋಷಿಸಿದರು. ಆರಾಧನಾ ಪ್ರಧಾನವಾದ ಕಲೆಗಳು (ಮುಡಿಯೇಟ್ಟ್, ಪಡಯಣಿ) ವೀರಗಾಥೆ, ಭಾವಗಾನಂ. ತಮಾಶಾ ಪಾಟ್ಟ್ ಎಂಬಿತ್ಯಾದಿಗಳಿಂದ ಸಂಪದ್ಭರಿತವಾದ ಈ ಕ್ಷೇತ್ರದಲ್ಲಿ ಹಲವು ಇಂದು ನಾಮಾವಶೇಷವಾಗಿವೆ. ತೆಯ್ಯಂ, ತಿರ, ಪೂತನ್, ಕಳಂಪ್ಪಾಟ್ಟ್, ಮುಡಿಯೇಟ್ಟ್, ಕೊರತಿ, ಪೆಲಿಕ್ಕಳ, ಎಣ್ಣಮಂದ್ರಂ(ಪಾಣರು, ಮುನ್ನೂಟ್ಟರು, ತೆಯ್ಯಂಪಾಡಿ ಕುರುಪ್ಪ್, ಪುಳ್ಳುವ ಪಣಿಕ್ಕರ್) ಮೊದಲಾದ ಕಲಾರೂಪಗಳಲ್ಲಿ ಇಂದಿಗೂ ಪಾಟ್ಟ್ ಸಾಹಿತ್ಯದ ಪಳೆಯುಳಿಕೆಗಳನ್ನು ಕಾಣಬಹುದು. ವಿಶಾಲವಾದ ಈ ಜನಪದ ಪರಂಪರೆಯ ಸ್ವರೂಪವೇ ಇಂದು ಸ್ಪಷ್ಟವಿಲ್ಲದಿರುವ ಇಂದಿನ ಸಂದರ್ಭದಲ್ಲಿ ಅವುಗಳನ್ನು ಕುರಿತು ಲಕ್ಷಣ ಗ್ರಂಥಗಳು ಮೀಮಾಂಸೆಗಳು ಇದೆಯೆಂದೋ, ಇಲ್ಲವೆಂದೋ, ಹೇಳುವುದೂ ಅಸಾಧ್ಯ. ಹಿಂದಿನ ನಮ್ಮ ಶಾಸ್ತ್ರಗ್ರಂಥಗಳಲ್ಲಿ ಕೆಲವು ಈ ಪರಂಪರೆಯನ್ನು ಉಲ್ಲೇಖಿಸಿವೆ ಎಂಬುದು ಮಾತ್ರ ನಮಗಿರುವ ಆಧಾರ.

ಪಾಟ್ಟು ಸಾಹಿತ್ಯ ಎನ್ನುವುದು ಮಲಯಾಳಂನ ಮೌಖಿಕ ಪರಂಪರೆಯ ಸಾಹಿತ್ಯ. ಇದು ದೇಸೀ ನೆಲೆಯಿಂದ ಹುಟ್ಟಿಕೊಂಡುದು. ಇದಕ್ಕೆ ಸಂಸ್ಕೃತದ ಪ್ರಭಾವವಾಗಲಿ, ಮಣಿಪ್ರವಾಳ ಶೈಲಿಯ ಪ್ರಭಾವವಾಗಲಿ ಇಲ್ಲ. ಇಲ್ಲಿನ ಚಿಂತನೆಯ ಸ್ವರೂಪ, ಅಭಿವ್ಯಕ್ತಿಯ ಶೈಲಿ ದೇಸೀಯ ಅಗತ್ಯಗಳ ನೆಲೆಗಟ್ಟಿನ ಮೇಲೆ ನಿಂತಿವೆ. ಮೇಲ್ನೋಟಕ್ಕೆ ಅನ್ನಿಸುವಂತೆ ಪಾಟ್ಟು ಸಾಹಿತ್ಯವು ಸಂಸ್ಕೃತ ಭಾಷೆಯನ್ನು ನಿಷೇಧಿಸುತ್ತದೆ. ಲೀಲಾತಿಲಕಂ ಈ ವಿಷಯವನ್ನು ದಾಖಲಿಸಿದ್ದರಿಂದ ಪಾಟ್ಟು ಸಾಹಿತ್ಯ ರಚನೆಕಾರರು ಇದನ್ನು ನಿಖರವಾಗಿ ಅನುಸರಿಸುತ್ತಿದ್ದರು ಎಂಬುದನ್ನು ತಿಳಿಯಬಹುದು.

ತಮಿಳು ಕಾವ್ಯ ಸಂದರ್ಭಕ್ಕಿಂತ ಸ್ಪಷ್ಟವಾಗಿ ಮಲಯಾಳಂ ಮೌಖಿಕ ಪರಂಪರೆ ಭಿನ್ನವಾಗುವ ಇನ್ನೊಂದು ಸಂದರ್ಭವಿದೆ. ತಮಿಳಿನ ಸಂಗಂ ಸಾಹಿತ್ಯ, ಭಕ್ತಿ ಸಾಹಿತ್ಯ, ನೀತಿ ಸಾಹಿತ್ಯ, ಪುರಾಣ ಕಾವ್ಯಗಳಲ್ಲೆಲ್ಲ ಮುಖ್ಯವಾಗಿ ವೈಚಾರಿಕತೆ, ಭಕ್ತಿ, ಭಾವ, ನೀತಿ, ನಿಲುವುಗಳಿಗೆ ಸಂಬಂಧಿಸಿದ ಆಶಯಗಳನ್ನು ದಾಖಲಿಸಲಾಗಿದೆ. ಆದರೆ ಮಲಯಾಳಂ ಮೌಖಿಕ ಪರಂಪರೆ ದುಡಿಮೆಯ ಆಶಯದ ನೆಲೆಯಲ್ಲಿ ಹುಟ್ಟಿಕೊಂಡಿದೆ. ಆ ಕಾರಣಕ್ಕಾಗಿ ಮೌಖಿಕ ಸಾಹಿತ್ಯದಲ್ಲಿ ವಂಚಿಪಾಟ್ಟು (ದೋಣಿ ಹಾಡು), ವಡಕ್ಕನ್ ಪಾಟ್ಟ್ (ಉತ್ತರದ ವೀರರ ಹಾಡುಗಳು) ಕೃಷಿ ಪಾಟ್ಟ್ ಇತ್ಯಾದಿಯಾಗಿ ವೃತ್ತಿಯನ್ನಾಧರಿಸಿದ ಪಾಟ್ಟು ಸಾಹಿತ್ಯ ಮಲಯಾಳಂನಲ್ಲಿ ಸಾಕಷ್ಟಿದೆ. ಇವು ತಮಿಳಿಗಿಂತ ಆಶಯದಲ್ಲಿ ಭಿನ್ನವಾಗುವುದರ ಜೊತೆಗೆ ಬದುಕಿನ ಲಯದೊಂದಿಗೆ ಕಾವ್ಯಲಯವನ್ನು ಸರಿದೂಗುವ ರಚನೆಗಳಾಗಿ ಕಾಣಿಸಿಕೊಂಡುವು. ಈ ಪಾಟ್ಟು ಸಾಹಿತ್ಯದ ಲಯವನ್ನು ಅನುಕರಿಸಿ ಅನೇಕ ಕಾವ್ಯಗಳು ಮಲಯಾಳಂನಲ್ಲಿ ಹುಟ್ಟಿಕೊಂಡಿವೆ.

ಇನ್ನೊಂದು ಮುಖ್ಯ ವಿಚಾರವೆಂದರೆ ತಮಿಳು ಸಾಹಿತ್ಯ ನಾಯಕ-ನಾಯಕಿಯರ ಪ್ರೇಮ ಆಶಯಗಳನ್ನು ಮುಖ್ಯವಾಗಿ ಪರಿಗಣಿಸಿ 'ಅಗಂ' ಎಂಬ ಕಾವ್ಯ ಪರಂಪರೆಯನ್ನು ಹುಟ್ಟುಹಾಕಿದೆ. ಆದರೆ ಮಲಯಾಳಂ ಮೌಖಿಕ ಸಾಹಿತ್ಯ ಸಂದರ್ಭದಲ್ಲಿ ಮಾತೃತ್ವದ ಸಂಕೇತ ಮಾತ್ರ ವಿಶಿಷ್ಟವಾಗಿದೆ. ತಾಯಿಯು ಹೆಣ್ಣು, ರಕ್ಷಕಿ, ದೇವಿ ಎಂಬಿತ್ಯಾದಿ ಪರಿಕಲ್ಪನೆಗಳ ನೆಲೆಯಲ್ಲಿ

ಮೌಖಿಕ ಸಾಹಿತ್ಯ ಪರಂಪರೆಯನ್ನು ಪೋಷಿಸಿದಾಳೆ. ಕಡಲ ತೀರದ ಮೀನುಗಾರರಿಗೆ ಕಡಲು (ಸಮುದ್ರರಾಜನಲ್ಲ) ಕಡಲಮ್ಮ. ಮಲಯಾಳಂ ಸಂಸ್ಕೃತಿಯ ನಿಯಂತ್ರಕ ಶಕ್ತಿಯನ್ನು ಹೊಂದಿದವಳು 'ಭಗವತಿ'. ಕಾಳಿ, ಭದ್ರೆ ಹೀಗೆ ದೈವಿಕ ಶಕ್ತಿಗಳೆಲ್ಲ ಮಾತೃತ್ವದ ಹೊಣೆ ಹೊತ್ತವರು. ತಾಯಿ ಕುಟುಂಬದ ಯಜಮಾನಿಯಾಗಿ ಮದುವೆ ಮಾಡಿಕೊಂಡು ಗಂಡನನ್ನು ಮನೆಗೇ ಕರೆಸಿಕೊಳ್ಳುವ ಸಮುದಾಯವೇ ಪ್ರಬಲವಾಗಿರುವ ಜನಸಂಸ್ಕೃತಿಯು ಮಾತೃ ಸಂಕಲ್ಪವನ್ನು ಪ್ರಮುಖ ಆಶಯವಾಗಿ ಪ್ರತಿಪಾದಿಸಿರುವುದರಲ್ಲಿ ಆಶ್ಚರ್ಯವೇನಿಲ್ಲ. ಮಲಯಾಳಂನ ಅಭಿಜಾತ ಸಾಹಿತ್ಯ ಕೃತಿಗಳೇ ಇರಲಿ, ಆಧುನಿಕ ಕಾವ್ಯಕೃತಿಗಳೇ ಇರಲಿ ಮಾತೃಸಂಕಲ್ಪದ ಛಾಯೆಯಲ್ಲಿಯೇ ಹುಟ್ಟಿಕೊಂಡಿವೆ ಎಂಬುದನ್ನು ಮರೆಯುವಂತಿಲ್ಲ. ಈ ಮಾತೃಶಕ್ತಿ ಮಲಯಾಳಂ ದೇಸೀ ಪರಂಪರೆಯನ್ನು ಪೋಷಿಸುತ್ತಿದೆ.

ದ್ರಾವಿಡ ಅಲಂಕಾರ ಶಾಸ್ತ್ರದಲ್ಲಿ, ಮೀಮಾಂಸಾ ವಿಚಾರಗಳಲ್ಲಿ ದೊಡ್ಡಸ್ಥಾನವಿರುವುದು ತಮಿಳಿನ 'ಅಗಂ ಕವಿತೆ', 'ಪುರಂ ಕವಿತೆ' ಎಂಬ ಪರಿಕಲ್ಪನೆಗಳಿಗೆ ಹಾಗೂ 'ತಿಣೈ' ಎಂಬ ಸಂಕೇತಕ್ಕೆ. ಮಲಯಾಳಂನಲ್ಲಿ ಆರಾಧನೆ ಹಾಗು ಮನರಂಜನಾ ಹಾಡುಗಳಲ್ಲಿ ಈ ತಮಿಳಿನ ಪರಂಪರೆ ಮುಂದುವರಿದಿದೆ. ತಮಿಳು ಪ್ರದೇಶದ ಭಾಗವಾಗಿರುವ ಕೇರಳದಲ್ಲೂ ಸ್ವಾಭಾವಿಕವಾಗಿಯೇ ಆಶ್ರಯಿಸಬೇಕಾದ ಸಂಕೇತಗಳಾಗಿದ್ದುವು ಅವು. ಮುರುಗನ್, ಅಯ್ಯನ್, ಕಣ್ಣಗಿಯರು ಕಥನ ಕಾವ್ಯಗಳಿಗೂ, ಭಕ್ತಿಗೀತೆಗಳಿಗೂ ವಸ್ತುಗಳಾದರು. ಅರಯರ್ (ಕಡಲ ತೀರ) ಮಲಯವಾಸಿಗಳು, ಕೃಷಿಕರು ಇವರ ಹಾಡುಗಳಲ್ಲಿ, ಕತೆಗಳಲ್ಲಿ ಆಯಾ ಪ್ರದೇಶದ ಐಡೆಂಟಿಟಿಗಳಿವೆ. ಒಂದೊಂದು ಪ್ರದೇಶದ ಮೌಖಿಕ ಸಾಹಿತ್ಯಕ್ಕೂ ಮೂಲ ಸ್ವರೂಪಗಳಿದ್ದುವು. ಈ ಸ್ವರೂಪಗಳಿಗೇ ಹೆಚ್ಚಿನ ಪ್ರಚಾರವೂ ದೊರೆಯಿತು. ಇವುಗಳಲ್ಲಿ ಹೆಚ್ಚು ಜನಪ್ರಿಯವಾದುದು ಭದ್ರಕಾಳಿ. ಎಷ್ಟೋ ಕಲಾರೂಪಗಳಲ್ಲಿ, ಹಾಡುಗಳಲ್ಲಿ ಕಾಳಿ ವಿವಿಧ ರೂಪ ಭಾವಗಳಲ್ಲಿ ಪ್ರತ್ಯಕ್ಷವಾಗುತ್ತಾಳೆ. ಇದು ಕಳೆದರೆ 'ನಾಗ' ಎನ್ನುವ ಸಂಕೇತಕ್ಕೆ ಎರಡನೆಯ ಸ್ಥಾನವಿದೆ. ಜಾನಪದ ಸಾಹಿತ್ಯದ ಮಾತೃಸಂಕೇತವನ್ನು ಕಾಳಿಯಲ್ಲಿ ಗುರುತಿಸಬಹುದಾದರೆ ಕುಂಡಲಿನೀ ಸಂಕೇತವನ್ನು ನಾಗಾರಾಧನೆಯಲ್ಲಿ ಗುರುತಿಸಬಹುದು. ಮಾತೃಸಂಕಲ್ಪದಲ್ಲಿ ಪ್ರಾದೇಶಿಕ ಭಿನ್ನತೆಗಳು ಸಾಕಷ್ಟಿವೆ. ಯಕ್ಷಿ, ಪೂತಂನಿ, ವಡಕ್ಕನ್ ಪಾಟ್ಟಿನ ಲೋಕನಾರು ಕಾವಿಲಮ್ಮ ಹೀಗೆ ವಿವಿಧ ರೂಪದಲ್ಲಿ ಮಾತೃ ಪರಿಕಲ್ಪನೆ ಪ್ರತ್ಯಕ್ಷವಾಗುತ್ತದೆ. ಈ ಜಾನಪದ ಸಂಪ್ರದಾಯವು ಇಂದಿಗೂ ಕೂಡಾ ಮಲಯಾಳಂ ಕಾವ್ಯವನ್ನು ಪ್ರೇರಿಸುತ್ತಿವೆ ಎಂಬುದು ಸತ್ಯ. ಎಷ್ಟೋ ಆಧುನಿಕ ಕಾವ್ಯಗಳು ಈ ದ್ರಾವಿಡ ಆದಿರೂಪಗಳನ್ನು ಪುನರ್‌ಸೃಷ್ಟಿಸಿವೆ.

ಶಾಸ್ತ್ರಗ್ರಂಥಗಳಲ್ಲಿ ಎಲ್ಲಾ ಸಂಪ್ರದಾಯಗಳನ್ನು, ಜೀವನವಿಧಾನಗಳನ್ನು ಒಳಗೊಳಿಸಲು ಸಾಧ್ಯವಾಗದೇ ಹೋಗಿದೆ. ಆದ್ದರಿಂದ ದೇಸೀ ಚಿಂತನೆಗಳು, ದ್ರಾವಿಡರ ಆರಾಧನೆಯ ಪ್ರಾದೇಶಿಕ ಸಂಕೀರ್ಣತೆಗಳನ್ನು ಹಾಗೂ ಆರಂಭದ ಸ್ವರೂಪಗಳನ್ನು ಅಲಂಕಾರ ಗ್ರಂಥಗಳಲ್ಲಿ ನಾವಿಂದು ಕಾಣುವುದಿಲ್ಲ. ಬರೆಯದೆ ಇರುವ ಒಂದು ಬೃಹತ್ ಕಾವ್ಯಮೀಮಾಂಸೆ ಈ ನಾಡಿನಲ್ಲಿ ಇದೆ ಎಂಬುದು ಮಾತ್ರ ವಾಸ್ತವ.(ಸಂಸ್ಕೃತ ಕಾವ್ಯ ಮೀಮಾಂಸೆ ಎಲ್ಲರಿಗೂ ಸ್ವೀಕಾರಾರ್ಹ

ಉಪಮಾಲಂಕಾರಗಳು, ಧ್ವನಿ ಮೊದಲಾದ ವೈಚಿತ್ರ್ಯಗಳು, ಅವುಗಳನ್ನು ವಿಸ್ತರಿಸುವುದರ ಮೂಲಕ ಸಂಸ್ಕೃತ ಕಾವ್ಯಮೀಮಾಂಸೆ ಬೆಳೆದಿದೆ. ದ್ರಾವಿಡ ಕಾವ್ಯ ಮೀಮಾಂಸೆಯನ್ನು ಈ ಹಿನ್ನೆಲೆಯಲ್ಲಿ ಅರ್ಥೈಸುವ ಪ್ರಯತ್ನಗಳು ನಡೆದಿವೆ.) ಆದರೆ ಸಂಸ್ಕೃತಕ್ಕಿಂತ ಭಿನ್ನವಾದ ವಸ್ತು ಕಾವ್ಯಶೈಲಿಯ ಮೂಲಕ ದ್ರಾವಿಡಭಾಷೆಯಲ್ಲೂ ಸಾಹಿತ್ಯ ಸೃಷ್ಟಿಯಾಗಿದೆ. ಸಂಸ್ಕೃತದ ಛಾಯೆಯಿಲ್ಲದ ಅಚ್ಚ ದ್ರಾವಿಡ ಪ್ರದೇಶದ ಕಾವ್ಯ ಪರಂಪರೆಯ ಅಧ್ಯಯನಗಳ ಮೂಲಕ ದ್ರಾವಿಡದ್ದೇ ಆದ ಕಾವ್ಯ ಮೀಮಾಂಸಾ ವಿಧಿವಿಧಾನಗಳನ್ನು ಕಂಡುಕೊಳ್ಳಬಹುದು ಎಂದೆನಿಸುತ್ತದೆ.

## ಟಿಪ್ಪಣಿಗಳು

೧. ದ್ರಾವಿಡ ಭಾಷಾವರ್ಗದಲ್ಲಿ ಗುರುತಿಸಲಾದ ಎಲ್ಲಾ ಭಾಷೆಗಳೂ ಈ ಪದದ ವ್ಯಾಪ್ತಿಯಲ್ಲಿ ಬರುತ್ತದೆ.

೨. ಲೀಲಾ ತಿಲಕಂ(೧೪ನೇ ಶತಮಾನ), ಅಲಂಕಾರ ಸಕ್ಷೇಪಂ(೧೫ನೇ ಶತಮಾನ), ಕೇರಳ ಕೌಮುದಿ(೧೮೭೫), ಕೋವುಣ್ಣಿ ನೆಡುಜಾಡಿ. ಅರ್ಥಾಲಂಕಾರ ಮಣಿ ಪ್ರವಾಳಂ(೧೮೮೧) ವೇಳುತ್ತೇರಿಲ್ ಕೇಶವನ್ ವೈದ್ಯರ್, ಅಲಂಕಾರ ದರ್ಪಣಂ-ಸಿ.ಎ. ನಾಣುವಯ್ಯಶಾಸ್ತ್ರಿ, ಕೇರಳೀಯ ಕುವಲಯಾನಂದ(೧೮೮೯)-ಗೋವಿಂದ ಮೆನೋನ್, ಪರದೋಷ ಪ್ರಕರಣಂ ಮಣಿಪ್ರವಾಳಂ-ಪೆರುನ್ನೆಲ್ಲಿ ಕೃಷ್ಣನ್ ವೈದ್ಯರ್, ಶಬ್ದಭಂಗಿ(೧೮೯೫)-ಕೊಡುಜಲ್ಲೂರ್ ಕೊಚ್ಚುಣ್ಣಿ, ಅಲಂಕಾರ ಮೂಲಂ(೧೮೯೬) ಕೊಡುಜಲ್ಲೂರ್ ಕೊಚ್ಚುಣ್ಣಿ, ಉದಯಾಲಂಕಾರಂ (೧೮೯೫)-ನಾರಾಯಣ ನಂಬ್ಯಾರ್, ಪರದೋಷ ಪ್ರಕರಣಂ ಮಣಿಪ್ರವಾಳಂ(೧೮೯೭)-ಮೂಲೂರ್, ಭಾಷಾಭೂಷಣಂ(೧೯೦೨)-ಎ. ಆರ್. ರಾಜ ರಾಜವರ್ಮ, ಕೈರಳೀಧ್ವನಿ (೧೯೭೮)-ಪಿ.ಕೆ. ನಾರಾಯಣ ಪಿಳ್ಳೆ

## ಪರಾಮರ್ಶನ ಗ್ರಂಥಗಳು

೧. ಉಪಾಧ್ಯಾಯ ಯು.ಪಿ.(ಡಾ), ಸುಶೀಲಾ ಉಪಧ್ಯಾಯ (ಡಾ)-ಮಲಯಾಳ ಭಾಷೆ ಮತ್ತು ಸಾಹಿತ್ಯ, ಪ್ರಸಾರಂಗ, ಮೈಸೂರು ವಿಶ್ವವಿನಿದ್ಯಾಲಯ, ಮೈಸೂರು, ೧೯೭೩

೨. ಶ್ರೀನಿವಾಸ ಪಾ.ಶ(ಡಾ)-ಸಾಹಿತ್ಯ ಕಾವೇರಿ; ಕುವೆಂಪು ಅಧ್ಯಯನ ಕೇಂದ್ರ, ಬೆಂಗಳೂರು-೪೦, ೧೯೮೮

೩. ಸುಚಿತ್ರಲತ ಎಸ್., ಎಚ್.ಜಿ. ಮೀರಾ(ಅನು)ತಮಿಳು ಕಾವ್ಯ ಮೀಮಾಂಸೆ (ಮೂಲ: ಕಾರ್ಲೋಸ್), ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೩

೪. ಸುಬ್ರಾಯ ಭಟ್ ಪಿ, ತಿಮ್ಮಪ್ಪ ಲಿ.ಕೆ(ಅನು)-ಲೀಲಾತಿಲಕಂ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪

೫. ಮಾಹಿತಿ ಒದಗಿಸಿದವರು: ಪಿ. ನಾರಾಯಣ ಕುರುಪ್ಪ್ (ತಿರುವನಂತಪುರಂ) ಮತ್ತು ಸಿ. ರಾಘವನ್ (ಕಾಸರಗೋಡು)

# ಪಾರ್ವತಿಗುಡ್ಡರ ಸಂಪ್ರದಾಯ

● ಕೇಶವನ್ ಪ್ರಸಾದ್

**೧. ಅಧ್ಯಯನದ ಉದ್ದೇಶ:** ಕರ್ನಾಟಕದಲ್ಲಿ ಕೊಳ್ಳೇಗಾಲ ಒಂದು ವಿಶಿಷ್ಟವಾದ ತಾಲೂಕು. ಬಹಳ ಹಿಂದಿನಿಂದಲೂ ಮಾಯ-ಮಂತ್ರ-ಮಾಟಕ್ಕೆ ಹೆಸರಾಗಿದ್ದ ಈ ತಾಲೂಕಿಗೆ ಬರುವುದಕ್ಕೆ ಯಾರಿಗಾದರೂ ಭಯವಾಗುತ್ತಿತ್ತು. ಈ ತಾಲೂಕಿನಲ್ಲಿ ಕರ್ನಾಟಕ ಹಾಗೂ ತಮಿಳುನಾಡು ಗಳೆರಡರಲ್ಲೂ ಅಪಾರ ಭಕ್ತರನ್ನು ಹೊಂದಿರುವ ಮಲೆಯ ಮಾದೇಶ್ವರನ ಬೆಟ್ಟವಿದೆ. 'ಧರೆಗೆ ದೊಡ್ಡವರು' ಎಂದೇ ಹೆಸರಾದ ಮಂಟೇಸ್ವಾಮಿಯ ಶಿಷ್ಯ ಸಿದ್ದಪ್ಪಾಜಿಯ ಕ್ಷೇತ್ರವಾದ ಚಿಕ್ಕಲ್ಲೂರು ಇಲ್ಲಿದೆ. ಇವಲ್ಲದೆ ಹಳ್ಳಿ ಹಳ್ಳಿಯಲ್ಲೂ ಗ್ರಾಮದೇವತೆಯಾಗಿ ಆರಾಧಿಸಲ್ಪಡುವ ಪಾರ್ವತಿ ಅವತಾರವೆಂದೇ ತಿಳಿಯಲಾದ ಮಾರಮ್ಮ ಕೂಡ ಈ ತಾಲ್ಲೂಕಿನ ಪ್ರಮುಖ ದೇವತೆಯಾಗಿದ್ದಾಳೆ.

ಇದುವರೆಗೂ ಮಾದಪ್ಪ, ಮಂಟೇಸ್ವಾಮಿ ಮತ್ತು ಅವರ ಶಿಷ್ಯರ ಬಗೆಗೆ ಬಹಳಷ್ಟು ಅಧ್ಯಯನ ನಡೆದಿದೆ. ಇವರ ಬಗೆಗೆ ಇರುವ ಹತ್ತಾರು ರಾತ್ರಿ ಹಾಡಬಹುದಾದ ಮಹಾಕಾವ್ಯವನ್ನು ಸಂಗ್ರಹಿಸಲಾಗಿದೆ. ಇಷ್ಟೇ ವಿಶಿಷ್ಟವಾದ ಮತ್ತೊಂದು "ಪಾರ್ವತಿ ಗುಡ್ಡ ಸಂಪ್ರದಾಯ" ಪರಿಚಯಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

### ೨. ಗುಡ್ಡ ಸಂಪ್ರದಾಯ

"ದೇವರ ಗುಡ್ಡ" ಎಂದರೆ 'ದೇವರ ಶಿಷ್ಯ' ಎಂಬ ಅರ್ಥವಿದೆ. ಕರ್ನಾಟಕದಲ್ಲಿ ಮಾದೇಶ್ವರ ಗುಡ್ಡರು, ಮಂಟೇಸ್ವಾಮಿ ಗುಡ್ಡರು, ಎಲ್ಲಮ್ಮನ ಗುಡ್ಡರು ಇರುವುದನ್ನು ಕಾಣಬಹುದು. ಈ ಗುಡ್ಡರು ಆಯಾ ದೇವರ ಹೆಸರಿನಲ್ಲಿ ಭಿಕ್ಷೆಯನ್ನು ಸಾರುತ್ತಾರೆ. ಎಡಗೈ ಬಲಗೈಯವರು. ಕುಂಬಾರರು, ಮಡಿವಾಳರು ಹೆಗ್ಗಡೆಗೌಡರು ಸಿದ್ದಪ್ಪಾಜಿಯ ಗುಡ್ಡರಾಗುವರು; ಬಲಗೈಯವರು. ಹಾಲುಮತದವರು, ಗೊಲ್ಲರು ಜುಂಜಪ್ಪನ ಗುಡ್ಡರಾಗುವರು. ಒಕ್ಕಲಿಗರು, ಗಂಗಾಮತಸ್ಥರು. ಉಪ್ಪಲಿಗರು, ಮಡಿವಾಳರು, ಪರಿವಾರದವರು, ಬಲಗೈಯವರು ಮಾದೇಶ್ವರ ಗುಡ್ಡರಾಗುವರು." ಕುರುಬರು, ಗಂಗಾಮತಸ್ಥರು. ಮತ್ತು ಬಲಗೈಯವರು(ಹರಿಜನ) ವಿಶೇಷವಾಗಿ ಮಾದೇಶ್ವರನ ಗುಡ್ಡರಾಗುತ್ತಾರೆ. ಗುಡ್ಡರಾಗಲು ಬಡವ ಬಲ್ಲಿದರೆಂಬ ಭೇದಭಾವವಿಲ್ಲ.

ದೇವರ ಗುಡ್ಡರು ಮತ್ತು ಆಯಾ ದೇವರ ಒಕ್ಕಲಿನವರು ತಮ್ಮ ತಮ್ಮ ದೇವರ

ಹೆಸರು ಕೊಡುವುದು ಪದ್ಧತಿ. ಉದಾಹರಣೆಗೆ ಮಂಟೇಸ್ವಾಮಿ ಸಿದ್ದಪ್ಪಾಜಿ ಗುಡ್ಡರುಗಳು ಮಂಟೇಪಯ್ಯ ಮಂಟೇಲಿಂಗಯ್ಯಾ ಸಿದ್ದಪ್ಪ, ಸಿದ್ದಯ್ಯ ಎಂದು ಹೆಸರಿಟ್ಟುಕೊಳ್ಳುವಂತೆ, ಮಾದೇಶ್ವರ ಗುಡ್ಡರು ಮಾದಪ್ಪ, ಮಾದಯ್ಯ, ಪುಟ್ಟಮಾದ, ಮಾದೇವ, ಹೆಂಗಸರಾದರೆ, ಮಾದಮ್ಮ, ಮಾದೇವಿ, ಪುಟ್ಟಮಾದಿ, ದೊಡ್ಡಮಾದಿ ಎಂಬ ಹೆಸರಿಟ್ಟುಕೊಳ್ಳುವರು.

ಈ ಪ್ರಮುಖ ಗುಡ್ಡ ಸಂಪ್ರದಾಯಗಳ ನಡುವೆ 'ಪಾರ್ವತಿ ಗುಡ್ಡ' ಸಂಪ್ರದಾಯವೂ ಈಗ ಸೇರ್ಪಡೆಯಾಗಬೇಕಿದೆ. ಆ ಕುರಿತ ಅಧ್ಯಯನ ವಿವರಣೆ ಮುಂದಿದೆ.

**ಪ್ರಾಚೀನತೆ**

ಮಂಟೇಸ್ವಾಮಿ, ಮಾದೇಶ್ವರ ಗುಡ್ಡ ಸಂಪ್ರದಾಯಗಳಿಗೆ ಕಳೆದ ಶತಮಾನಗಳಲ್ಲಿ ಕಾಣಿಸಿಕೊಂಡ ಸಂತರು ಕಾರಣರಾಗಿದ್ದಾರೆ. ಚಾರಿತ್ರಿಕ ವ್ಯಕ್ತಿಗಳಾದ ಇವರು ತಮ್ಮ ಕ್ರಿಯೆಗಳಿಂದ ದೈವಸ್ಥಾನವನ್ನು ಪಡೆದು ಇಂದು ಆರಾಧಿಸಲ್ಪಡುತ್ತಿದ್ದಾರೆ. ಇವರಿಗೆ ಶಿಷ್ಯರು, ಸೇವಕರು ಇದ್ದಾರೆ. ಆದರೆ ಬಹಳ ಪ್ರಾಚೀನವಾದುದು ಪಾರ್ವತಿ ಗುಡ್ಡದ ಹಿನ್ನೆಲೆ ಚಾರಿತ್ರಿಕವಾದುದಲ್ಲ, ಪೌರಾಣಿಕವಾದುದು.

ಈಶ್ವರ ಮತ್ತು ಪಾರ್ವತಿಗೆ ಕಲ್ಯಾಣವಾದ ಬಳಿಕ ಈಶ್ವರನು-ಬಹಳ ದಿನಗಳವರೆಗೆ ಕಾಣೆಯಾಗುತ್ತಾನೆ. ತನ್ನ ಪತಿಯನ್ನು ಕಾಣದ ಪಾರ್ವತಿಯು ಚಿಂತಾಮಗ್ನಳಾಗಿ ಕುಳಿತಿರುತ್ತಾಳೆ. ಆ ಸಂದರ್ಭದಲ್ಲಿ ಕೆಲವು ಭಕ್ತರು ಪಾರ್ವತಿಯನ್ನು 'ನಿಮ್ಮ ಚಿಂತೆಗೆ ಕಾರಣ ಏನು?' ಎಂಬುದಾಗಿ ಪ್ರಶ್ನಿಸುತ್ತಾರೆ. ಆಗ ಪಾರ್ವತಿಯು ತನ್ನ ಭಕ್ತರ ಮುಂದೆ ದುಃಖವನ್ನು ತೋಡಿಕೊಳ್ಳುತ್ತಾ 'ಈಶ್ವರನನ್ನು ಹುಡುಕಿ ತನ್ನಿ, ಅಲ್ಲಿಯವರೆಗೂ ನನಗೆ ಮುಖವನ್ನು ತೋರಿಸಬೇಡಿ, ಊಟವನ್ನು ಮಾಡಬೇಡಿ ಎಂದು ಹೇಳಿ ಕಳುಹಿಸುತ್ತಾಳೆ. ಆಗ ಭಕ್ತರು "ಆಗಲಿ ತಾಯಿ, ನಿನ್ನ ದುಃಖವನ್ನು ದೂರಮಾಡುತ್ತೇವೆ. ಎಷ್ಟೇ ಕಷ್ಟವಾದರೂ ಈಶ್ವರನನ್ನು ಹುಡುಕಿ ಕರೆತರುತ್ತೇವೆ, ಅಲ್ಲಿಯವರೆಗೂ ಊಟ ಮಾಡುವುದಿಲ್ಲ. ಏಲಕ್ಕಿ ಮತ್ತು ಬೆಲ್ಲ ಇವುಗಳ ಸೇವನೆಯಿಂದಲೇ ಕಾರ್ಯ ಮುಂದುವರಿಸುತ್ತೇವೆ" ಎಂದು ಮೂವರು ಭಕ್ತರು ಈಶ್ವರನ ಅನ್ವೇಷಣೆಗೆ ಹೊರಡುತ್ತಾರೆ. ಇವರು ದಾರಿಯಲ್ಲಿ ಹೋಗುವಾಗ ದನಕಾಯುವ ಒಬ್ಬ ವ್ಯಕ್ತಿಯು ಭೇಟಿಯಾಗಿ 'ಎಲ್ಲಿಗೆ ಹೋಗುತ್ತೀದ್ದೀರಿ' ಎಂದು ಕೇಳುತ್ತಾನೆ. ಇವರು ತಮ್ಮ ಪ್ರಯಾಣದ ಉದ್ದೇಶವನ್ನು ಹೇಳಿದಾಗ 'ನಾನೂ ಬರುತ್ತೇನೆ' ಎಂದು ಹೇಳುತ್ತಾನೆ. ಆತನನ್ನು ಆತನ ಜೊತೆಗಿದ್ದ ಒಂದು ದನವನ್ನು ಕರೆದುಕೊಂಡು ಪಾರ್ವತಿಭಕ್ತರು ಮುಂದೆ ಸಾಗುತ್ತಾರೆ.

ಈ ನಾಲ್ವರು ಪ್ರಯಾಣ ಮಾಡುವ ಸಂದರ್ಭದಲ್ಲಿ ಒಬ್ಬ ಕುರಿ ಕಾಯುವವನು ಸಿಕ್ಕು 'ಎಲ್ಲಿಗೆ ಹೋಗುತ್ತೀದ್ದೀರಿ' ಎಂದು ಕೇಳುತ್ತಾನೆ. ಇವರು ನಡೆದಿರುವ ಸಂಗತಿಯನ್ನು ಹೇಳಲು, ಅವನೂ ಇವರ ಜೊತೆ ಸೇರಿಕೊಳ್ಳುತ್ತಾನೆ. ಹೀಗೆ ಒಟ್ಟು ಐದು ಜನರು ಕೂಡಿ ಊಟವಿಲ್ಲದೆ, ನಿದ್ರೆಯಿಲ್ಲದೆ ಕಾಡುಮೇಡಿನಲ್ಲಿ ತಿರುಗುತ್ತಾ ಇದ್ದ ಕಾಲದಲ್ಲಿ, ಒಬ್ಬ ಸಾಧುವು ಇವರನ್ನು ಎದುರಾಗಿ, 'ನಿಮ್ಮ ಕಷ್ಟ ಏನಪ್ಪ? ಎಲ್ಲಿ ಊಟ ಮಾಡಿದ್ರಿ? ಯಾಕೆ ಈ ರೀತಿ ಕಾಡ್ನಲ್ಲಿ ಹೊರಟಿದ್ದೀರಿ?' ಎಂದು ಕೇಳುತ್ತಾನೆ. ಇವರು ನಡೆದ ವಿಚಾರವನ್ನೆಲ್ಲಾ ವಿವರಿಸಲು,

ಆತನು 'ನನ್ನ ಜೊತೆ ಬನ್ನಿ' ಎಂದು ಹೇಳಿ ಸ್ವಲ್ಪ ಮುಂದೆ ಹೋಗಿ ಕಣ್ಮರೆಯಾಗಿಬಿಡುತ್ತಾನೆ. ಐವರು ಕೂಡಿ ನಡೆಯುವಾಗ ಸ್ವಲ್ಪ ದೂರದಲ್ಲಿ ಒಂದು ಹೊಳೆ ಸಿಗುತ್ತದೆ. ಹೊಳೆಯ ದಡದ ಮರದ ಕೆಳಗೆ ಕಣ್ಮರೆಯಾಗಿದ್ದ ಸಾಧುವು ಕುಳಿತಿದ್ದು 'ಸ್ನಾನ ಮುಗಿಸಿ ಬನ್ನಿ' ಎಂದು ಕಳುಹಿಸುತ್ತಾನೆ. ಐವರೂ ಸ್ನಾನ ಮಾಡಿ ಬಂದ ಬಳಿಕ, ಮೊದಲಿಗೆ ದನದ ಜೊತೆಯಲ್ಲಿದ್ದ ಒಕ್ಕಲಿಗನನ್ನು ಕರೆಯುತ್ತಾನೆ. 'ನನ್ನ ಮೇಲೆ ಬಹಳ ಭಕ್ತಿ ಇಟ್ಟು ದನದ ಜೊತೆಯಲ್ಲಿ ಬಂದಿರುವೆ, ಇನ್ನು ಮುಂದೆ ನೀನು ಈ ನಂದಿಯನ್ನು ಮುಂದಿಟ್ಟುಕೊಂಡು ನನ್ನ ಪೂಜೆಗೆ ಪ್ರತಿವರ್ಷ ಬರಬೇಕು. ಇವರೆಲ್ಲರಿಗೂ ನೀನು ಮುಖಂಡನಾಗಬೇಕು' ಎಂದು ಉಪದೇಶಿಸುತ್ತಾನೆ. ಅನಂತರ ಕುರಿ ಕಾಯುತ್ತಿದ್ದು ಬಂದವನನ್ನು ಕರೆದು, 'ನೀನು ಸಹ ನನ್ನ ಮೇಲೆ ಅಪಾರ ಭಕ್ತಿಯನ್ನು ಹೊಂದಿರುವೆ. ಕಾರಣ ನಂದಿಯ ಜೊತೆಯಲ್ಲಿ ಬರಬೇಕು' ಎಂದು ಹೇಳಿ ಕಳುಹಿಸುತ್ತಾನೆ. ಕೊನೆಯಲ್ಲಿ ಉಳಿದ ಮೂವರನ್ನು ಕರೆದು ಇನ್ನು ಮುಂದೆ ನೀವು ಪಾರ್ವತಿಯ ಭಕ್ತರಾಗಿ ಪ್ರತಿವರ್ಷ ಬಂದು ನನ್ನ ದರ್ಶನ ಮಾಡಿಕೊಂಡು ಹೋಗಿ ಎಂದು ಹೇಳುತ್ತಾನೆ.

ಸಾಧುವಿನ ವೇಷದಲ್ಲಿ ಶಿವನು ಈ ಐವರಿಗೆ ಕಾಣಿಸಿಕೊಂಡ ಸ್ಥಳವೇ ಶ್ರೀಶೈಲ ಎಂದೂ ಇಂದಿಗೂ ಐವರು ಭಕ್ತರು ನಂದಿಯ ಜೊತೆಯಲ್ಲಿ ಬಂದು ಈಶ್ವರನನ್ನು ಹುಡುಕುವ ಪದ್ಧತಿಯಿದ್ದು ಪಾರ್ವತಿಯ ಆ ಮೂರು ಭಕ್ತರೇ ಈಗಿನ ಪಾರ್ವತಿ ಗುಡ್ಡರಾಗಿ, ಆಕೆಯ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವರು ಎಂದೂ ಹೇಳಲಾಗುತ್ತದೆ.

ಕೊಳ್ಳೇಗಾಲ, ಯಳಂದೂರು, ನಂಜನಗೂಡು, ಚಾಮರಾಜನಗರ, ತಿರುಮಕೂಡಲ ನರಸೀಪುರ, ಈ ಐದು ತಾಲ್ಲೂಕುಗಳಲ್ಲಿ ಪಾರ್ವತಿಯನ್ನು ಮನೆದೇವತೆಯಾಗಿ ಹೊಂದಿರುವ ಜನರಿದ್ದಾರೆ. ಇಲ್ಲಿ ಕಂಡುಬರುವ ಪಾರ್ವತಿ ಗುಡ್ಡರನ್ನು ಒಂಬತ್ತು ಪ್ರಮುಖ ಮನೆಗಳು ಎಂದು ವಿಂಗಡನೆ ಮಾಡಿದ್ದಾರೆ.

೧. ಕಣ್ಣೂರು ಮಂಗಳಂ(ತೌರುಮನೆ). ೨. ಯಳಂದೂರು, ೩. ನಂಜನಗೂಡು, ೪. ಮುಡುಕುತೊರೆ(ಬೆಟ್ಟಹಳ್ಳಿ). ೫. ತಾಯೂರು, ೬. ಮಾಲಂಗಿ (ಕೊಳ್ಳೇಗಾಲ ತಾಲ್ಲೂಕು). ೭. ಮದ್ದೂರು ಮಂಗಲ, ೮. ಮೂಗೂರು (ನರಸೀಪುರ ತಾಲೂಕು). ೯. ಮದ್ದೂರು(ಯಳಂದೂರು ತಾಲ್ಲೂಕು)

ಒಂದೊಂದು ಮನೆಗಳಿಗೂ ೧೦ರಿಂದ ೧೫ ಗ್ರಾಮಗಳು ಒಳಪಡುತ್ತವೆ. ಆ ಒಂದು ಮನೆಗೆ ಒಬ್ಬ ಮುಖಂಡ. ಉದಾಹರಣೆಗೆ ಯಳಂದೂರು ಒಂದು ಮನೆಯೆಂದು ಪರಿಗಣಿಸಿದರೆ 'ಆ ತಾಲೂಕಿನಲ್ಲಿ ಇರುವ ಎಲ್ಲಾ ಗ್ರಾಮಗಳ ಗುಡ್ಡರಿಗೂ ಯಳಂದೂರಿನ ಓರ್ವ ಹಿರಿಯ ಗುಡ್ಡ ಮುಖಂಡನಾಗುತ್ತಾನೆ.

ಕೊಳ್ಳೇಗಾಲ ತಾಲೂಕಿನ ಕಣ್ಣೂರು ಮಂಗಲವನ್ನು ತೌರುಮನೆ ಎಂದು ಪರಿಗಣಿಸಲಾಗಿದೆ. ಕಾರಣ ಪಾರ್ವತಿಯು ಗ್ರಾಮದಲ್ಲಿ ನೆಲೆಗೊಂಡು ಗ್ರಾಮದೇವತೆಯಾಗಿದ್ದಾಳೆ. ವರ್ಷದ ಎಲ್ಲಾ ಕಾಲದಲ್ಲೂ ಈ ಗ್ರಾಮದಲ್ಲಿ ಇರುವ ದೇವಿಯು ಒಮ್ಮೆ ಮಾತ್ರ ಜಾತ್ರೆ ಉತ್ಸವದಲ್ಲಿ

ಮುಡುಕುತೊರೆಗೆ ಹೋಗುತ್ತಾಳೆ ಎಂಬುದಾಗಿ ಹೇಳುತ್ತಾರೆ. ಒಂಬತ್ತು ಮನೆಗಳಿಗೂ ಮದ್ದೂರಿನ ಹಿರಿಯ ಗುಡ್ಡ ಗುರುವಾಗಿರುತ್ತಾನೆ. ಇವರಲ್ಲಿ ಯಾವುದೇ ವಿವಾದ ಉಂಟಾದಾಗ ಅದರ ವಿಚಾರಣೆ ಮದ್ದೂರಿನ ಗುರುವಿನ ಮುಂದೆ ನಡೆಯುತ್ತದೆ. ಅವನ ತೀರ್ಮಾನವನ್ನು ಎಲ್ಲರೂ ಒಪ್ಪಿಕೊಳ್ಳಬೇಕು.

## ಆಚರಣೆ

ಹಿಂದೆ ಪ್ರಸ್ತಾಪಿಸಿದ ಪುರಾಣದ ಹಿನ್ನೆಲೆಯಲ್ಲಿ ಅನೇಕ ಆಚರಣೆಗಳು ಜರುಗುತ್ತವೆ. ಶ್ರೀಶೈಲಕ್ಕೆ ಈಶ್ವರನನ್ನು ಹುಡುಕಿಕೊಂಡು ಹೋಗುವುದು, ಹರಕೆ ಸಲ್ಲಿಸುವುದು, ಜಾತ್ರೆ, ಕುಂಕುಮ ವಿಭೂತಿ ಹಂಚಿಕೆ, ಹೀಗೆ ಹಲವಾರು ಆಚರಣೆಗಳು ಈ ಸಂಪ್ರದಾಯದಲ್ಲಿ ಪ್ರತಿ ವರ್ಷವೂ ತಪ್ಪದೆ ನೆರವೇರುತ್ತವೆ.

## ಗುಡ್ಡನ ಬಿಡುವ ದೀಕ್ಷಾ ವಿಧಾನ

ಗುಡ್ಡರ ದೀಕ್ಷಾ ವಿಧಾನವು ಸಾಮಾನ್ಯವಾಗಿ ಮದುವೆಯ ಕಾರ್ಯಕ್ರಮವನ್ನು ಹೋಲುತ್ತದೆ. ಅಷಾಢ ಮಾಸ ಬಿಟ್ಟು ಶಿವರಾತ್ರಿ, ದೀಪಾವಳಿ, ಯುಗಾದಿ, ಕಾರ್ತಿಕ ಮಾಸಗಳಲ್ಲಿ ಗುಡ್ಡನ ಬಿಡುವ ಕಾರ್ಯ ನೆರವೇರುತ್ತವೆ. ತಮ್ಮ ಹಿರಿಯ ಮಗನನ್ನು ಗುಡ್ಡನನ್ನಾಗಿ ಮಾಡಲು ಸೋಮವಾರ ಮತ್ತು ಶುಕ್ರವಾದ ದಿನಗಳಲ್ಲಿ ಒಳ್ಳೆಯ ಮೂಹೂರ್ತ ಕೇಳಿ ನಿಶ್ಚಯಿಸಿ, ಅಂದು ಗುಡ್ಡನ ಬಿಡುವ ವ್ಯಕ್ತಿಗೆ ತಲೆಯ ಕೂದಲನ್ನು ಸಂಪೂರ್ಣ ತೆಗೆಯುತ್ತಾರೆ. ಮೈಮೇಲೆ ಹಳೆಯ ವಸ್ತ್ರವು ಇಲ್ಲದಂತೆ ತೆಗೆದು ಸ್ನಾನ ಮಾಡಿಸಿ ಹೊಸ ಉಡುಗೆಯನ್ನು ಉಡಿಸುತ್ತಾರೆ. ಗುಡ್ಡನನ್ನು ಹಸೆಮಣೆಯ ಮೇಲೆ ಕುಳ್ಳರಿಸಿ ಕಳಸದ ಮೇಲೆ ಕೈಯಿರಿಸಿ ಕಂಕಣ ಕಟ್ಟುತ್ತಾರೆ. ಮುತ್ತೈದೆಯರು ಪಾರ್ವತಿದೇವಿ ಹಾಡನ್ನು ಹೇಳುತ್ತಾರೆ. ಗುರುಗಳು, ಒಂದು ರೂಪಾಯಿ ಬಂಧವನ್ನೂ ವೀಳ್ಯದ ಎಲೆಯಲ್ಲಿ ಹಾಕಿ ಶಾಸ್ತ್ರೋಕ್ತವಾಗಿ ಮಂತ್ರ ಪಠಿಸುವುದರೊಂದಿಗೆ ಗುಡ್ಡನಾಗುವವರಿಗೆ ಕಂಕಣ ಕಟ್ಟಲಾಗುತ್ತದೆ. ನೆರೆದಿರುವ ಗ್ರಾಮದ ಪ್ರಮುಖರು ಕಂಕಣದ ಕೈಗೆ ಹಾಲು-ತುಪ್ಪ ಎರೆದು ಹೋಗುತ್ತಾರೆ. ಎಲ್ಲರಿಗೂ ವೀಳ್ಯ ಕೊಡುವ ಪದ್ಧತಿ ಇದೆ. ಇಷ್ಟೂ ಕಾರ್ಯವು ರಾತ್ರಿ ನೆರವೇರುತ್ತದೆ.

ಮುಂಜಾನೆ ದೇವರು ತರುವುದು ಅಥವಾ ಗಂಗಾ ಪೂಜೆ ನೆರವೇರುತ್ತದೆ. ಬಹಳ ಪ್ರಮುಖವಾದ ಈ ಆಚರಣೆ ನಂತರವೇ ಮಣಿ ಧರಿಸುವುದು. ಐದು ಚಿಕ್ಕ ಮಕ್ಕಳಿಗೆ ಸ್ನಾನ ಮಾಡಿಸಿ ಮಡಿ ಬಟ್ಟೆ ಉಡಿಸಿ (ಈ ಐವರಲ್ಲಿ ಗುಡ್ಡನ ಬಿಡುವವನು ಒಬ್ಬ). ಇಬ್ಬರ ಕೈಗಳಲ್ಲಿ ಪೂಜಾ ತಟ್ಟೆ, ಕಳಸ ಉಳಿದ ಮೂವರ ಕೈಗೆ ಗಡಿಗೆಗಳನ್ನು ಕೊಡುತ್ತಾರೆ. ನಂದಿ ಕಂಬ ಮತ್ತು ವಾದ್ಯ ಸಮೇತವಾಗಿ ಕೆರೆ ಅಥವಾ ಬಾವಿಯ ಬಳಿ ಹೋಗುತ್ತಾರೆ. ಗುರುವು ಸಕಲ ಪೂಜೆಯನ್ನು ನೆರವೇರಿಸುತ್ತಾನೆ. ಪ್ರತಿಯೊಂದು ಗಡಿಗೆಗೂ ನೀರು ತುಂಬಿಸಿ ಹೊಂಬಾಳೆ ಹೂಗಳಿಂದ ಶೃಂಗರಿಸಿ ಗಂಧ, ಕುಂಕುಮ, ವಿಭೂತಿ ಹಚ್ಚುತ್ತಾನೆ. ನೆರೆದಿರುವವರಿಗೆ ವೀಳ್ಯ ಹಂಚಿ ಬಳಿಕ ಮರಳಿ ಬರುತ್ತಾರೆ.

ಗುಡ್ಡನ ಬಿಡುವವನನ್ನು ಹಸೆಮಣೆ ಮೇಲೆ ಕೂರಿಸಿ ಮುಂದೆ ಕರಿ ಕಂಬಳಿಯನ್ನು ಹಾಸಿ ಅದರ ನಾಲ್ಕು ಮೂಲೆಯಲ್ಲಿ ಹಣ್ಣು, ನೀರು ತುಂಬಿದ ಚೆಂಬು ಇಟ್ಟು, ನಡುವೆ ದೊಡ್ಡ ಚೆಂಬಿಗೆ ಇಡುತ್ತಾರೆ. ಇದರ ಮೇಲೆ ಆತನ ಕೈಯನ್ನು ಇಟ್ಟು ಕಂಕಣಬದ್ಧನಾಗಿ, ಗಂಗೆ ಸಾಕ್ಷಿಯಾಗಿ ಹಿರಿಯರು ನೇಮಿಸಿದ ಕಾರ್ಯದಲ್ಲಿ ಶುಚಿತ್ವ, ಲೋಪ ಬಾರದಂತೆ ನಿಷ್ಠೆ ಉದ್ದೇಶವನ್ನು ನೆರವೇರಿಸುತ್ತೇನೆಂದು ವಚನ ಪಡೆಯಲಾಗುತ್ತದೆ. ಶುಭಗಳಿಗೆಯು ಸಮೀಪಿಸುತ್ತಲೆ ಮೂರು ಅಥವಾ ಐದು ರುದ್ರಾಕ್ಷಿ ಮಣಿಗಳಿಂದ ಕೂಡಿರುವ ದಾರವನ್ನು ಆತನ ಕೊರಳಿಗೆ ಕಟ್ಟುತ್ತಾರೆ. ಜೋರಾಗಿ ವಾದ್ಯ ಮೊಳಗುತ್ತದೆ. ಇಲ್ಲಿಗೆ ಗುಡ್ಡನ ದೀಕ್ಷೆಯು ಮುಗಿಯುತ್ತದೆ.

ಅನುಕೂಲ ಕಡಿಮೆ ಇರುವವರು ಮುಡುಕುತೊರೆ ಗುಡಿಯಲ್ಲಿ ಗುಡ್ಡದೀಕ್ಷಾ ಕಾರ್ಯಕ್ರಮವನ್ನು ಸರಳವಾಗಿ ನೆರವೇರಿಸುವರು. ಉಳ್ಳವರು ತಮ್ಮ ಮನೆಯಲ್ಲೇ ದೀಕ್ಷೆ ಇಟ್ಟುಕೊಂಡು ಬಾಂಧವರಿಗೆ ಊಟ ಹಾಕುತ್ತಾರೆ. ಹೀಗೆ ಪಾರ್ವತಿ ಒಕ್ಕಲಿನ ಹಿರಿಯ ಮಗನಿಗೆ ಕಡ್ಡಾಯವಾಗಿ ಪಾರ್ವತಿ ಸೇವೆಗೆಂದು ಗುಡ್ಡನ ದೀಕ್ಷೆ ಕೊಡಿಸುವುದು ಇಂದಿಗೂ ಮುಂದುವರಿದಿದೆ.

### ಜಾತ್ರೆ

ಪ್ರತಿ ವರ್ಷವು ಫೆಬ್ರವರಿ ತಿಂಗಳ ಎರಡನೆ ಅಥವಾ ಮೂರನೆ ವಾರದಲ್ಲಿ ಬೆಟ್ಟಳ್ಳಿಯ ಮುಡುಕುತೊರೆಯಲ್ಲಿ ಜಾತ್ರೆ ನೆರವೇರುತ್ತದೆ. ಇದು ಪಾರ್ವತಿ ಶಿವನ ಕಲ್ಯಾಣದ ಆಚರಣೆ. ಶಿವ ಪಾರ್ವತಿಯರ ಕಲ್ಯಾಣ ಉತ್ಸವವನ್ನು ಚಾಮರಾಜನಗರ ತಾಲ್ಲೂಕಿನ ಮಾದನಹಳ್ಳಿ ಗ್ರಾಮದ ಪಾರ್ವತಿ ಒಕ್ಕಲಿನವರೇ ನೆರವೇರಿಸಬೇಕು. ಶಿವ-ಪಾರ್ವತಿಯರ ವಿಗ್ರಹವನ್ನು ಬಣ್ಣಬಣ್ಣದ ಕಾಗದಗಳಿಂದ ಶೃಂಗರಿಸಿದ ಮರದ ಕುರ್ಚಿನಲ್ಲಿರಿಸಿ ಚಿನ್ನದ ಆಭರಣಗಳಿಂದ ಅಲಂಕರಿಸಿ ಮದುವೆಯನ್ನು ಏರ್ಪಡಿಸುತ್ತಾರೆ. ಮುಡುಕುತೊರೆಯ ಗಿರಿಯಿಂದ ಕೆಳಗಿರುವ ತೋಪಿನಲ್ಲಿ ಉತ್ಸವ ಮಾಡುತ್ತಾರೆ. ಇಲ್ಲಿ ಒಂಬತ್ತು ದಿನಗಳು ಜಾತ್ರೆ ನೆರವೇರುತ್ತದೆ.

ಐದು ತೇರುಗಳಿದ್ದು, ದೊಡ್ಡ ತೇರಿನಲ್ಲಿ ಶಿವಪಾರ್ವತಿಯರು, ಉಳಿದ ಚಿಕ್ಕ ನಾಲ್ಕು ತೇರುಗಳಲ್ಲಿ ಗಿರಿಜಾಂಬಿಕೆ, ಗಾಂಗಣೇಶ, ಮುರುಗ ಮತ್ತು ನಂದೀಶ್ವರರನ್ನು ಇರಿಸಿ ಎಳೆಯುವ ಪದ್ಧತಿ ಇದೆ. ಕೊನೆಯ ಮೂರೂ ರಾತ್ರಿ ಹೊತ್ತಲ್ಲಿ ಶಿವಪಾರ್ವತಿಯರನ್ನು ತೆಪ್ಪದಲ್ಲಿ ಕೂರಿಸಿ ಒಂದು ದಡದಿಂದ ಮತ್ತೊಂದು ದಡಕ್ಕೆ ಉತ್ಸವ ತರುವರು.

### ೨. ಹರಕೆ ಸಲ್ಲಿಕೆ

ಭಕ್ತರು ಪಾರ್ವತಿ ದೇವಿಯಲ್ಲಿ ಹರಕೆ ಮಾಡಿಕೊಂಡು ಜಾತ್ರೆಯ ಸಮಯದಲ್ಲಿ ಹರಕೆ ಸಲ್ಲಿಸುವುದು ಕಂಡುಬರುತ್ತದೆ. ಹರಕೆಯು ಕೇವಲ ಕಷ್ಟ ಪರಿಹಾರಕ್ಕೆ ಮಾತ್ರವಲ್ಲ, ದನಕರುಗಳಿಂದ ಕಷ್ಟ-ಖಾಯಿಲೆ ಬಂದಾಗ ಪಂಜಿನ ಸೇವೆ ಮಾಡಿಸುವುದಾಗಿ ಹರಕೆ ಮಾಡಿಕೊಳ್ಳುತ್ತಾರೆ. ಆ ಪ್ರಕಾರ ಜಾತ್ರೆಯಲ್ಲಿ ಅಂತಹ ದನಗಳನ್ನು ತಂದು ಕೊಂಬುಗಳಿಗೆ ಪಂಜನ್ನು ಕಟ್ಟಿ ಗುಡಿಯ ಸುತ್ತ ಪ್ರದಕ್ಷಿಣೆ ಮಾಡಿಸುವರು. ಉತ್ತರಾಣಿ, ಮಡಕಲು ಹೇರಳ ಭಕ್ತಾ

ಜೊತೆಗೆ ನಂದಿಯನ್ನು ಕರೆದುಕೊಂಡು ಹೋದುದರಿಂದ ದನಗಳ ಜಾತ್ರೆಯು ನಡೆಸಲಾಗುತ್ತದೆ ಎನ್ನುತ್ತಾರೆ. ಆದರೆ ಈ ಪೆಂಜಿನ ಸೇಪೆ ಕ್ರಮೇಣ ಬದಲಾವಣೆ ಹೊಂದಿ ದನಗಳ ಜಾತ್ರೆ ಯಾಗುವುದಕ್ಕೆ ಕಾರಣವಾಗಿರಬಹುದು. ಈ ಸೀಮೆಯಲ್ಲಿ ಮುಡುಕುತೊರೆಯದು ದನಗಳ ದೊಡ್ಡ ಜಾತ್ರೆಯಾಗಿದೆ.

**೩. ತಂಪು**

ಮುಡುಕುತೊರೆ ಜಾತ್ರೆಯಾದ ೧೦-೧೫ ದಿನಗಳಲ್ಲಿ ಒಂಬತ್ತೂ ಮನೆಗಳಲ್ಲೂ ನೇಮಿತವಾದ ಗುಡ್ಡರು ಶ್ರೀಶೈಲಕ್ಕೆ ಹೊರಡುತ್ತಾರೆ. ಇವರ ಜೊತೆಯಲ್ಲಿ ಒಕ್ಕಲಿಗರು, ಗೊರವರು ಪ್ರತಿಮನೆಯಿಂದ ಒಬ್ಬೊಬ್ಬ ಬರುತ್ತಾರೆ. ಜೊತೆಗೆ ಆಯಾ ಮನೆಯ ಬಸವಗಳು ಬರುತ್ತವೆ. ಶ್ರೀಶೈಲದಿಂದ ಯಾತ್ರೆಯನ್ನು ಮುಗಿಸಿಕೊಂಡು ಬಂದ ಇವರಿಗೆ ಪ್ರತಿ ಊರುಗಳಲ್ಲಿಯೂ ಸತ್ಕಾರ ಮಾಡಬೇಕು. ಈ ಆಚರಣೆಯನ್ನು 'ತಂಪು' ಎನ್ನುವರು. ಇದಕ್ಕಾಗಿ ಒಂದೊಂದು ಗ್ರಾಮದಲ್ಲಿ ಒಂದೊಂದು ದಿನ ನಿಗದಿಪಡಿಸಿ ತಂಪು ಆಚರಣೆಯನ್ನು ನೆರವೇರಿಸುವರು.

ಸಾಮಾನ್ಯವಾಗಿ ಈ ಆಚರಣೆಯು ಮಂಗಳವಾರ ಅಥವಾ ಶುಕ್ರವಾರದಂದು ನೆರವೇರುತ್ತದೆ. ಒಂದು ವಾರ ಮುಂಚಿತವಾಗಿಯೇ ಆ ಗ್ರಾಮಕ್ಕೆ ವಿಷಯವನ್ನು ಸಾರುತ್ತಾರೆ. ಅಂದು ಗ್ರಾಮದ ಎಲ್ಲಾ ಕೋಮಿನ ಜನರು ಮನೆ-ಮಠ ತೊಳೆದು ಸ್ನಾನ ಮಾಡಿ ಉಪವಾಸವಿರುತ್ತಾರೆ. ಸಾಯಂಕಾಲ ಏಳು ಗಂಟೆಯ ಸುಮಾರಿಗೆ ಬಸವಗಳ ಮೆರವಣಿಗೆ ಬಂದಾಗ, ಹಣ್ಣು ಕಾಯಿ ಕೊಟ್ಟು ಪೂಜಿಸಿಕೊಳ್ಳುವರು.

ದನ ಕಾಯುತ್ತಿದ್ದ ಒಕ್ಕಲಿಗನೆ ಬಸವನ ಮೇಲೆ ಕುಳಿತು ನಗಾರಿಯನ್ನು ಬಾರಿಸುವನು. ಪಾರ್ವತಿ ಭಕ್ತರು ಅರ್ಥಾತ್ ಪಾರ್ವತಿ ಗುಡ್ಡರು ಜೊತೆಯಲ್ಲಿಯೇ ಇರುತ್ತಾರೆ. ಪ್ರಮುಖ ಬೀದಿಗಳಲ್ಲಿ ಸಾಗಿದ ಮೆರವಣಿಗೆ ಆರಾಧ್ಯ ಜಂಗಮರ ಬೀದಿಯಲ್ಲಿ ಕೊನೆಗೊಳ್ಳುತ್ತದೆ. ಅಲ್ಲಿ ಪಾರ್ವತಿಗುಡ್ಡರು, ಬಸವಗಳು, ವಾದ್ಯಸಮೇತ ವೀರಶೈವರು, ಆರಾಧ್ಯರ ಮನೆ ಮನೆಗೆ ಹೋಗಿ ಅವರು ನೀಡುವ ಕಜ್ಜಾಯ-ತುಪ್ಪದ ಉಪಚಾರ ಸ್ವೀಕರಿಸುತ್ತಾರೆ. ಬಳಿಕ ಹರಿಜನರ ಬೀದಿಗೆ ಪಾರ್ವತಿ ಗುಡ್ಡರು ಮಾತ್ರ ಬಸವ ಮತ್ತು ವಾದ್ಯ ಸಮೇತ ಮನೆ ಮನೆ ಮುಂದೆ ಹೋದಾಗ ತಂಬಿಟ್ಟಿನ ಆರತಿಯನ್ನು ನೀಡುತ್ತಾರೆ. ಆನಂತರ ದಲಿತರು ತಮ್ಮ ಮನೆಯಲ್ಲಿ ಸಸ್ಯಾಹಾರದ ಅಡುಗೆ ಮಾಡಿ ಪಾರ್ವತಿಗುಡ್ಡರನ್ನು ಸತ್ಕರಿಸುವರು. ಇದೆಲ್ಲ ಮುಗಿಯುವಾಗ ಬೆಳಕು ಹರಿಯುತ್ತದೆ.

**೪. ಕುಂಕುಮ ವಿಭೂತಿ ಪ್ರಸಾದ ಹಂಚಿಕೆ**

ಶ್ರೀಶೈಲಕ್ಕೆ ಹೋಗಿದ್ದ ಪಾರ್ವತಿಗುಡ್ಡರು ತಾವು ತಂದಿರುವ ಪ್ರಸಾದವನ್ನು ಕಪ್ಪು ಧೂಳ್ತ ಹಂಚುವುದು ಕೊನೆಯ ಆಚರಣೆ. ಇದರಲ್ಲಿ ಧೂಪ, ಕುಂಕುಮ, ದ್ರಾಕ್ಷಿ-ಕಲ್ಲುಸಕ್ಕರೆ ಇರುತ್ತದೆ. ಇದನ್ನು ನೀಡ ಬಂದವರಿಗೆ ಭಕ್ತಿಯಿಂದ ಮಣೆ ಹಾಕಿ ಕುಳ್ಳಿರಿಸುತ್ತಾರೆ. ಪ್ರಸಾದವನ್ನು ಮೊರವನ್ನು

ತಂದು ಆದರದಿಂದ ಸ್ವೀಕರಿಸುತ್ತಾರೆ. ಇದನ್ನು ಕುಟುಂಬದವರು ದೇವರ ಮುಂದೆ ಇರಿಸುವರು.

## ೪. ಭಾಗವಹಿಸುವ ಕೋಮಿನ ಜನರು

ಪಾರ್ವತಿ ಗುಡ್ಡ ಸಂಪ್ರದಾಯದ ಆಚರಣೆಯಲ್ಲಿ ಬೇರೆ ಬೇರೆ ಹಂತದಲ್ಲಿ ನೆರವೇರುವ ಕೆಲಸಗಳನ್ನು ನಿರ್ವಹಿಸುವ ಸಲುವಾಗಿ ಆಯಾ ಕೋಮಿನ ಸಾಮಾಜಿಕ ಅಂತಸ್ತನ್ನು ಅವಲಂಬಿಸಿ ಒಂದೊಂದು ಕೆಲಸಗಳನ್ನು ನೇಮಿಸಿಕೊಂಡಿರುವುದು ಕಂಡುಬರುತ್ತದೆ. ಪಾರ್ವತಿಯ ಮಹಾಭಕ್ತನಾದುದರಿಂದ ಈತನಿಗೆ ಪ್ರತಿವರ್ಷ ದೇವತೆಯ ದರ್ಶನ ಪಡೆಯಲು ಅವಕಾಶ ದೊರೆಯುತ್ತದೆ. ಅದೇ ಪ್ರಕಾರವಾಗಿ ಇಂದು ಪಾರ್ವತಿ ಗುಡ್ಡ ಅಥವಾ ಶಿಷ್ಯನಾಗಿ ಶ್ರೀಶೈಲಕ್ಕೆ ಹೋಗುವುದು ಕಡ್ಡಾಯ. ಹಾಗೆಯೇ ಅಲ್ಲಿಂದ ತಂದ ಪ್ರಸಾದವನ್ನು ತನ್ನ ಕೋಮಿನ ಜನರಿಗೆ ಹಂಚುವ ಕಾರ್ಯವನ್ನು ನಿರ್ವಹಿಸುತ್ತಾನೆ. ಅದಕ್ಕಾಗಿ ಪಾರ್ವತಿ ಒಕ್ಕಲಿನವರು ತಮ್ಮ ಹಿರಿಮಗನನ್ನು ಕಡ್ಡಾಯವಾಗಿ ಪಾರ್ವತಿಗುಡ್ಡನಾಗಿ ನೇಮಿಸುವುದು ಮುಂದುವರಿದಿದೆ. ಪಾರ್ವತಿಯ ಹೆಸರಿಗೆ ಹರಕೆ ಬಿಟ್ಟ ಬಸವನನ್ನು ಆರಾಧ್ಯ ಜಂಗಮರು ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಾರೆ. ಪ್ರತಿ ವರ್ಷವು ಶ್ರೀಶೈಲಕ್ಕೆ ನೇಮಕದಂತೆ ಒಬ್ಬೊಬ್ಬರು ಹೋಗುತ್ತಾರೆ. ಬಂದ ಬಳಿಕ ತಮ್ಮ ಕೋಮಿನವರಿಗೆ ಪ್ರಸಾದ ಹಂಚುತ್ತಾರೆ. ಈಶ್ವರನ ಭಕ್ತನಾದುದರಿಂದ ನಂದಿಯ ಜೊತೆಯಲ್ಲಿ ಈತನು ಶ್ರೀಶೈಲಕ್ಕೆ ಹೋಗುತ್ತಾನೆ. ಬಸವನ ಶೃಂಗಾರದ ಕಾರ್ಯವನ್ನು ಈತನೇ ನಿರ್ವಹಿಸುವನು. ಗ್ರಾಮದಲ್ಲಿ ತಮ್ಮ ಕೋಮಿನ ಜನರಿಗೆ ಪ್ರಸಾದ ಹಂಚುವನು. ಗ್ರಾಮದಲ್ಲಿ ನೆರವೇರುವ ತಂಪು ಆಚರಣೆಯ ದಿನದಂದು ಈ ಕೋಮಿನ ಹೆಣ್ಣುಮಕ್ಕಳು ಉತ್ಸವ ಸಂದರ್ಭದಲ್ಲಿ ಪಂಜುಗಳನ್ನು ಉರಿಸುತ್ತಾ ಬೆಳಕು ಮಾಡುವರು. ಇದಕ್ಕಾಗಿ ಹರಕೆ ಮಾಡಿಕೊಂಡಿರುತ್ತಾರೆ.

ಮಡಿವಾಳರು ತಂಪು ಆಚರಣೆಯ ಸಂದರ್ಭದಲ್ಲೂ ಪಂಜು ಉರಿಸುತ್ತಾ ಉತ್ಸವಕ್ಕೆ ಬೆಳಕು ಒದಗಿಸುವ ಕಾಯಕ ಮಾಡುತ್ತಾರೆ.

## ೫. ಉಪಸಂಹಾರ

ಕೆಲವೊಮ್ಮೆ ಗುಡ್ಡನ ಬಿಡುವ ಸಂಪ್ರದಾಯ ಒತ್ತಾಯವೇ ಆಗಿರುತ್ತದೆ. ಏಕೆಂದರೆ ಕುಟುಂಬದ ಹಿರಿಯ ಮಗನಾದವನು ಕಡ್ಡಾಯವಾಗಿ ಗುಡ್ಡನಾಗಬೇಕು. ಮನಸಿಲ್ಲದಿದ್ದರೂ ಒಪ್ಪಿಕೊಳ್ಳಬೇಕಾಗುತ್ತದೆ. ಕೆಲವರಿಗೆ ಇದರಿಂದ ಮಾನಸಿಕ ಹಿಂಸೆಯು ಆಗುವುದುಂಟು. ಇಲ್ಲಿನ ನಿಯಮದಂತೆ ಪ್ರತಿ ವರ್ಷವು ಗ್ರಾಮಕ್ಕೆ ಬಂದರು ಅಥವಾ ಗುರುಮನೆಯಲ್ಲಿ ಇವರು ಶ್ರೀಶೈಲಕ್ಕೆ ಹೋಗುವುದುಂಟು. ಅವನ್ನು ಪಾರ್ವತಿ ದೇವಿಯು ಕನಸಿನಲ್ಲಿ ಬಂದು ಹೇಳಿದವರು ಹೋಗಬೇಕು ಎಂದು ನಂಬಿದ್ದಾರೆ. ಈ ರೀತಿ ತಿಂಗಳುಗಟ್ಟಲೆ ಮನೆ-ಮಡದಿಯನ್ನು ಬಿಟ್ಟು ಹೊರಗೆ ಹೋಗಿದ್ದರಿಂದ, ಸಾಂಸಾರಿಕ ಬದುಕಿನಲ್ಲಿ ಬಿರುಕುಗಳಾಗಿರುವ ಉದಾಹರಣೆಗಳಿವೆ.

ದೇವರ ಗುಡ್ಡರಾದವರು ಇತರರಂತೆ ಸಹಜ ಬದುಕನ್ನು ಬದುಕುವುದು ಸಾಧ್ಯವಿಲ್ಲ. ದೇವತೆಗೆ ತಪ್ಪಾಗಿ ನಡೆದುಕೊಂಡರೆ ಅಂಥವರಿಗೆ ಮುಟ್ಟು ಬಿಡುತ್ತದೆ ಎಂದು ಭಾವಿಸುವ

ದೇವತೆಗೆ ತಪ್ಪಾಗಿ ನಡೆದುಕೊಂಡೆ ಎಂಬ ಭ್ರಮೆಯಿಂದ ಅನೇಕ ಪಾರ್ವತಿ ಗುಡ್ಡರಿಗೆ ಹುಚ್ಚು ಹಿಡಿದಿರುವುದು ಉಂಟು.

'ತಂಪು' ಆಚರಣೆಯು ಬಡವರಾದವರಿಗೆ ಮತ್ತಷ್ಟು ಆರ್ಥಿಕ ಹೊರೆಯನ್ನು ಹೊರಿಸುತ್ತದೆ. ಹೀಗೆ ಅನೇಕ ಸಾಮಾಜಿಕ ಕೌಟುಂಬಿಕ ಸಮಸ್ಯೆಗಳಿಗೆ ಇದು ಕಾರಣವಾಗಿದ್ದರೂ, ಮೈಸೂರು ಚಾಮರಾಜನಗರ ಜಿಲ್ಲೆಗಳ ಈ ಭಾಗದಲ್ಲಿ ಪಾರ್ವತಿಗುಡ್ಡದ ಸಂಪ್ರದಾಯ ಈಗಲೂ ರೂಢಿಯಲ್ಲಿದೆ.



ಹಿಂದಣ ಹೆಜ್ಜೆ

# ಶ್ರೀ ಚಾಮರಾಜೇಂದ್ರ ಒಡೆಯರವರ ರಾಜ್ಯಾಭಿಷೇಕೋತ್ಸವ

● ಎಂ. ಶಿಂಗ್ರಯ್ಯ

(ಈ ಭಾಗವನ್ನು 'ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರವರ ಚರಿತ್ರೆ' (೧೯೦೩) ಎಂಬ ಕೃತಿಯಿಂದ ಆರಿಸಿಕೊಳ್ಳಲಾಗಿದೆ. ಎಂ. ಶಿಂಗ್ರಯ್ಯ ಎಂಬುವರು ಬರೆದ ಈ ಕೃತಿ ಮೈಸೂರಿನ ವಸಂತ ಸಾಹಿತ್ಯ ಮಾಲೆಯಿಂದ ಪ್ರಕಟವಾಯಿತು. ಇದು ಮೂಲತಃ ಒಬ್ಬ ದೊರೆಯ ಜೀವನ ಚರಿತ್ರೆಯಾದರೂ, ಈ ಕೃತಿ ೧೯ನೇ ಶತಮಾನದ ಕೊನೆಯ ಭಾಗದ ಮೈಸೂರು ರಾಜ್ಯಕ್ಕೆ ಸಂಬಂಧಿಸಿದ ಅನೇಕ ಕುತೂಹಲಕರ ಸಂಗತಿಗಳನ್ನು ಹೇಳುತ್ತದೆ. 'ಸತ್ಯಸಂಧರಾದ' ಬ್ರಿಟೀಶರನ್ನು ಹಾಗೂ ಸಭ್ಯರಾದ ಮೈಸೂರು ಒಡೆಯರನ್ನು ಕೀರ್ತಿಸುವ ಉದ್ದೇಶವುಳ್ಳ ಈ ಕೃತಿ, ತನಗೇ ಅರಿಯದಂತೆ ಅನೇಕ ಚಾರಿತ್ರಿಕ ಸತ್ಯಗಳನ್ನು ಪ್ರಕಟಿಸಿದೆ. ಇಲ್ಲಿ ಯಾವ ವಿಷಯ ಹೇಳಿದರೆ ತನ್ನ ಕೃತಿಯ ನಾಯಕನ ಕೀರ್ತಿಗೆ ಕುಂದುಂಟಾಗುತ್ತದೆ ಎಂದು ಅರಿಯದ ಮುಗ್ಧತೆ ಕೂಡ ಇಲ್ಲಿ ಕೆಲಸ ಮಾಡಿದೆ. ಚಾಮರಾಜ ಒಡೆಯರ್ ಹಾಗೂ ಲಾರ್ಡ್ ಹಾಲ್ ಹೌಸಿಯರ ನಡುವೆ ನಡೆದ ಸಂಭಾಷಣೆ ಇದಕ್ಕೆ ಸಾಕ್ಷಿ. ಬ್ರಿಟೀಶರ ವಿರುದ್ಧ ಹೋರಾಡಿ ಮಡಿದವರೂ ಟಿಪ್ಪುವಿನ ಬಗೆಗೆ ಅಸಹನೆ, ಭಾರತವನ್ನು ದಾಸ್ಯದಲ್ಲಿಟ್ಟಿದ್ದರೂ ಒಡೆಯರಿಗೆ ಮರಳಿ ರಾಜ್ಯಾಧಿಕಾರ ಕೊಟ್ಟವರೆಂಬ ಕಾರಣಕ್ಕೆ ಬ್ರಿಟೀಶರ ಬಗೆಗೆ ಇರುವ ಆರಾಧನೆ ಈ ಕೃತಿಯ ವಿಶೇಷ. ವಸಾಹತುಶಾಹೀ ಯಜಮಾನಿಕೆಯನ್ನು ಒಪ್ಪಿಕೊಂಡ ಒಂದ ಮನಸ್ಸು, ಕೆಲವು ಸಂಗತಿಗಳನ್ನು ಅವಮಾನವೆಂದು ಭಾವಿಸದ ಚಾರಿತ್ರಿಕ ಸಂದರ್ಭದಲ್ಲಿ ಹುಟ್ಟಿದ ಕೃತಿಯಿದು. ಕರ್ನಾಟಕದ ಕೆಲವು ಚರಿತ್ರಕಾರರು ನಮ್ಮ ದೇಶೀಯ ರಾಜರ ಬಗೆಗೆ, ಅವರು ದೇಶೀಯರು ಎಂಬ ಒಂದೇ ಕಾರಣಕ್ಕೆ, ವಸಾಹತುಶಾಹಿಯೊಂದಿಗೆ ಕೈಮಿಲಾಯಿಸಿದ ಸಂಗತಿಯನ್ನು ಮರೆಮಾಚಿ ಅಭಿಮಾನದ ಗಾಥೆಗಳನ್ನು ನಿರ್ಮಿಸಿ ಹರಡಿದ್ದಾರೆ. ಇದೇ ಸಂದರ್ಭದಲ್ಲಿ ಅವರು ನಾಡಿನ ಜನ ವಸಾಹತುಶಾಹಿ ಆಳ್ವಿಕೆ ವಿರುದ್ಧ ಧೀಮಂತವಾಗಿ ಹೋರಾಡಿದ ಗಾಥೆಯನ್ನೂ ಅವಗಣಿಸುತ್ತಾರೆ. ಚರಿತ್ರೆಯಲ್ಲಿ ಹೂಳಲಾಗದ ವಿರಸ ಸಂಗತಿಗಳನ್ನು [illegible] ಬಿಡುವುದೇ ಒಂದು ಸೋಜಿಗ. ಈ ಕೃತಿಯು ಅಮಾಯಕವಾಗಿ ಪ್ರಕಟಿಸಿರುವ ಸಂಗತಿಗಳು ಈ ಚರಿತ್ರೆಯ [illegible] ಬಯಲುಮಾಡುತ್ತದೆ. ಇಲ್ಲಿ ಕೊಡಲಾಗಿರುವ ಪಟ್ಟಾಭಿಷೇಕದ ಸಂದರ್ಭದಲ್ಲಿ ರಾಜ್ಯಾಧಿಕಾರ ಪಡೆಯುವ ಸಂಭ್ರಮದ ಜತೆಜತೆಯಲ್ಲಿಯೇ, [illegible]

ಹೀನಾಯವಾದ ತಹನಾಮೆಯಿದೆ. ತಮಗಿಂತ ಬಲಾಢ್ಯರ ಜತೆ ಸಣ್ಣ ಲಾಭಗಳಿಗಾಗಿ ಮಾಡಿಕೊಳ್ಳಲಾಗುವ ಒಪ್ಪಂದಗಳ ಲಕ್ಷಣವೇ ಇಂತಹುದಿರಬೇಕು. ನಮ್ಮ ಸರಕಾರಗಳು ಜಾಗತೀಕರಣದ ಮುಂಚೂಣಿ ದೇಶಗಳ ಜತೆ ಹೊಸಹೊಸ ಕೌಲುಗಳನ್ನು ಮಾಡಿಕೊಳ್ಳುತ್ತಿರುವ ಹಾಗೂ ಚರಿತ್ರೆ ಪುನರಾವರ್ತನೆಗೊಳ್ಳುತ್ತಿದೆ ಅನಿಸುತ್ತಿರುವ ಈ ಸಂದರ್ಭದಲ್ಲಿ ಚರಿತ್ರೆಯ ಈ ತುಣುಕನ್ನು ನೆನಪಿಸಿಕೊಳ್ಳುವುದು ಉಚಿತವಾಗಿದೆ -ಸಂ)

ಹಿಂದೆ ಮುಮ್ಮಡಿ ಕೃಷ್ಣರಾಜ ಒಡೆಯರವರು ಜೀವಿಸಿದ್ದ ಕಾಲದಲ್ಲಿಯೇ ಇಂಡಿಯಾ ಸ್ಟೇಟ್ ಸೆಕ್ರಿಟೆರಿಗಳಾದ ಲಾರ್ಡ್ ನಾರ್ತ್‌ಕೋಟ್‌ರವರು ಬರೆದು ಕಳುಹಿಸಿದ ನಿರೂಪದಲ್ಲಿ ಮುಂದೆ ಶ್ರೀಮನ್ಮಹಾರಾಜ ಶ್ರೀಚಾಮರಾಜೇಂದ್ರ ಒಡೆಯರವರು, ರಾಜಯೋಗ್ಯವಾದ ವಿದ್ಯಾಭ್ಯಾಸವನ್ನು ಮಾಡಿ ರಾಜ್ಯಭಾರವನ್ನು ವಹಿಸುವುದಕ್ಕೆ ತಕ್ಕ ಅರ್ಹತೆಯನ್ನು ಪಡೆದು ಪ್ರಾಪ್ತ ವಯಸ್ಕರಾದ ಕೂಡಲೇ ಸಂಪ್ರದಾಯಾನುಸಾರವಾಗಿ ಬಂದ ಯಾದವಕುಲದ ಸಿಂಹಾಸನಾಧಿಪತ್ಯವನ್ನು ಪುನಃ ಅವರ ವಶಕ್ಕೆ ಒಪ್ಪಿಸಿ ಬಿಡುವುದಾಗಿ ವಾಗ್ದಾನ ಮಾಡಿದ್ದರಷ್ಟೆ. ಈಗ ಸಮರ್ಥರಾದ ವಿದ್ಯಾಗುರುಗಳ ಬಳಿಯಲ್ಲಿ ವಿದ್ಯಾಭ್ಯಾಸವನ್ನು ಪೂರಯಿಸಿಕೊಂಡು, ಉಪನಯನ, ವಿವಾಹ ನಿಷೇಕಾದಿ ಸಂಸ್ಕಾರಗಳನ್ನು ಪಡೆದು, ಪ್ರಾಪ್ತವಯಸ್ಕರಾಗಿಯೂ ರಾಜತೇಜೋವಿರಾಜಮಾನರಾಗಿಯೂ ಇರುವ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಮೈಸೂರು ರಾಜ್ಯಲಕ್ಷ್ಮಿಯ ಹಸ್ತಗ್ರಹಣವನ್ನು ಮಾಡುವುದಕ್ಕೆ ತಕ್ಕ ಕಾಲವು ಒದಗಿತು. ಇದನ್ನು ಕಂಡ ಸತ್ಯಸಂಧರಾದ ಬ್ರಿಟಿಷ್ ಸರಕಾರದವರು ಆಡಿದ ಭಾಷೆಗೆ ನ್ಯೂನತೆ ಬಾರದಂತೆ ೧೮೮೧ನೆಯ ಇಸವಿ ಮಾರ್ಚಿ ೧ರಲ್ಲಿ ಒಂದು ಹೊಸ ತಹನಾಮೆಯನ್ನು ಹುಟ್ಟಿಸಿದರು.

**ತಹನಾಮೆ:** ಬ್ರಿಟಿಷ್ ಸರಕಾರದವರು ಮೈಸೂರು ಸಂಸ್ಥಾನವನ್ನು ಬಹುಕಾಲದವರೆಗೆ ತಮ್ಮ ಅಧೀನದಲ್ಲಿಟ್ಟುಕೊಂಡು ಇಲ್ಲಿನ ರಾಜ್ಯಭಾರದಲ್ಲಿ ಸರ್ವೋತ್ತಮವಾದ ಕ್ರಮವನ್ನು ನೆಲೆಗೊಳಿಸಿರುವರು. ಮುಮ್ಮಡಿ ಕೃಷ್ಣರಾಜ ಒಡೆಯರವರು ಗತಿಸಿದ ಕಾಲದಲ್ಲಿ ಬ್ರಿಟಿಷ್ ಸರಕಾರದವರು ಹಾಗೆ ತಾವು ನೆಲೆಗೊಳಿಸಿರುವ ರಾಜ್ಯಭಾರಕ್ರಮಕ್ಕೆ ಸ್ವಲ್ಪವೂ ನ್ಯೂನತೆಬಾರದಂತೆ ಕಾಪಾಡಿಕೊಂಡು ಬರುವುದಕ್ಕೆ ಅವಶ್ಯಕಗಳಾದ ನಿಬಂಧನೆಗಳಿಗೂ ಒಡಂಬಡಿಕೆಗಳಿಗೂ ಅನುಸಾರವಾಗಿ ಈ ದೇಶದ ರಾಜರು ಈ ಸಂಸ್ಥಾನವನ್ನು ಆಳಬೇಕೆಂಬ ಉದಾರೇಚ್ಛೆಯುಳ್ಳವರಾಗಿರುವುದರಿಂದ, ಗತಿಸಿದ ಮಹಾರಾಜರ ಸ್ವೀಕೃತ ಪುತ್ರರಾದ ಶ್ರೀ ಚಾಮರಾಜೇಂದ್ರ ಒಡೆಯರವರು ಈ ಸಂಸ್ಥಾನವನ್ನು ಪರಿಪಾಲಿಸುವ ರಾಜರಾಗಿರುವುದಕ್ಕೆ ಅರ್ಹತೆಯನ್ನು ಪಡೆದಿರುವರೆಂದು ತಿಳಿದುಬಂದ ಪಕ್ಷದಲ್ಲಿ, ಇನ್ನುಮುಂದೆ ನಿರ್ಧರಿಸಲ್ಪಡುವ ನಿಬಂಧನೆಗಳಿಗೂ ಒಡಂಬಡಿಕೆಗಳಿಗೂ ಅನುಸಾರವಾಗಿ ಆಳತಕ್ಕುದೆಂದು ಗೊತ್ತುಮಾಡಿ ಈ ಸಂಸ್ಥಾನಾಧಿಪತ್ಯವನ್ನು ಅವರ ವಶಕ್ಕೆ ಒಪ್ಪಿಸತಕ್ಕುದೆಂದು ನಿರ್ಣಯ ಮಾಡಿದರು. ಈಗ ಶ್ರೀ ಚಾಮರಾಜೇಂದ್ರ ಒಡೆಯರ್ ಬಹದ್ದೂರ್‌ರವರು ಹದಿನೆಂಟು ವರುಷ ವಯಸ್ಸನ್ನು ಪಡೆದು ರಾಜತ್ವಕ್ಕೆ ಅರ್ಹರಾಗಿರುವರೆಂದು ಬ್ರಿಟಿಷ್ ಸರಕಾರದವರಿಗೇ ಕಂಡುಬಂದು ಹಿಂದೆ ಸೂಚಿಸಿರುವ ಪ್ರಕಾರ ಮೇಲ್ಕಂಡ ಸಂಸ್ಥಾನದ ರಾಜ್ಯಭಾರವನ್ನು ಈಗ ಒಪ್ಪಿಸಬೇಕಾಗಿರುವುದರಿಂದ, ಯಾವ ಒಡಂಬಡಿಕೆಗಳಿಗೆ ಅನುಸಾರವಾಗಿ ಅವರಿಗೆ ರಾಜ್ಯವನ್ನು ಒಪ್ಪಿಸಬೇಕೋ ಅಂತಹ ಒಡಂಬಡಿಕೆಗಳನ್ನು ನಿರ್ಧಾರಮಾಡಿ ಲೇಖನಮೂಲಕ ಒಂದು ತಹನಾಮೆಯನ್ನು ಹುಟ್ಟಿಸಿ ಆ ಮಹಾರಾಜರಿಗೆ ಒಪ್ಪಿಸತಕ್ಕುದು ಯುಕ್ತವಾಗಿದೆ. ಆ ತಹನಾಮೆ ಏನೆಂದರೆ-

೧. ಮಹಾರಾಜ ಚಾಮರಾಜೇಂದ್ರ ಒಡೆಯರ್ ಬಹದ್ದೂರ್ ರವರಿಗೆ ೧೮೮೧ನೆಯ ಇಸವಿ ಮಾರ್ಚಿ ೨೫ನೆಯ ತಾರೀಖಿನ ದಿವಸ ಮೈಸೂರು ರಾಜ್ಯದ ಆಡಳಿತವನ್ನು ಒಪ್ಪಿಸಿ ರಾಜ್ಯಾಭಿಷೇಕೋತ್ಸವವನ್ನು ನೆರವೇರಿಸತಕ್ಕದ್ದು.

೨. ಮೇಲೆ ಹೇಳಿದ ಮಹಾರಾಜರವರೂ ಮತ್ತು ಅವರ ಉತ್ತರಾಧಿಕಾರಿಗಳೂ ಮುಂದೆ ಹೇಳುವ ಕರಾರುಗಳಂತೆ ನಡೆದುಕೊಂಡು ಬರುವವರೆಗೂ ಮೇಲೆ ಹೇಳಿದ ರಾಜ್ಯ ಸ್ವಾಧೀನಕ್ಕೆ ಅರ್ಹತೆಯನ್ನು ಪಡೆದಿರತಕ್ಕದ್ದು.

೩. ಮೇಲೆ ಕಂಡ ರಾಜ್ಯಕ್ಕೆ ಚಾಮರಾಜೇಂದ್ರ ಒಡೆಯರವರ ಸಂತತಿಯವರು-ಎಂದರೆ ಔರಸಪುತ್ರರಾಗಲಿ ಅವರ ಕುಲಾಚಾರದಂತೆ ಸ್ವೀಕೃತಪುತ್ರರಾಗಲಿ ಹಕ್ಕುದಾರರಾಗಿರುತ್ತಾರೆ. ಆದರೆ ಆಳುವುದಕ್ಕೆ ಶುದ್ಧಾಂಗವಾಗಿ ಯೋಗ್ಯತೆಯಿಲ್ಲದವರೆ ಅಂತವರಿಗೆ ಹಕ್ಕು ಇರುವುದಿಲ್ಲ. ಗವರ್ನರ್ ಜನರಲ್ ಇನ್ ಕೌನ್ಸಿಲ್‌ರವರು ಒಪ್ಪಿದ ಹೊರತು ಯಾರ ಹಕ್ಕು ನಿರ್ಣಯವಾಗುವುದಿಲ್ಲ. ಮೇಲ್ಕಂಡ ಚಾಮರಾಜೇಂದ್ರ ಒಡೆಯರವರಿಗೆ ಔರಸಪುತ್ರರಾಗಲಿ ಸ್ವೀಕೃತಪುತ್ರರಾಗಲಿ ಇಲ್ಲದ ಪಕ್ಷಕ್ಕೆ ಅವರಿಗೆ ಸೇರಿದ ಶಾಖಾ ಸಂತತಿಯಿಂದ ಹಕ್ಕುದಾರರನ್ನು ಗೊತ್ತುಮಾಡತಕ್ಕದು ಗವರ್ನರ್ ಜನರಲ್ ಇನ್ ಕೌನ್ಸಿಲ್‌ರವರ ಅಧಿಕಾರದಲ್ಲಿರುತ್ತದೆ.

೪. ಮಹಾರಾಜ ಚಾಮರಾಜೇಂದ್ರ ಒಡೆಯರವರೂ ಮತ್ತು ಅವರ ಉತ್ತರಾಧಿಕಾರಿಗಳೂ ಸಹ ಇನ್ನುಮುಂದೆ ಮೈಸೂರು ಮಹಾರಾಜರೆಂದು ಕರೆಯಲ್ಪಡತಕ್ಕದು. ಇವರುಗಳು ಗ್ರೇಟ್ ಬ್ರಿಟನ್ ಮತ್ತು ಐರ್ಲೆಂಡ್ ರಾಜ್ಯಗಳಿಗೆ ರಾಣಿಯವರಾಗಿಯೂ ಹಿಂದೂಸ್ಥಾನದ ಚಕ್ರವರ್ತಿನಿಯವರಾಗಿಯೂ ಇರುವ ಮಹಾರಾಜ್ಞಿಯವರಿಗೂ ಅವರ ಹಕ್ಕುದಾರರಿಗೂ ಸಹ ಯಾವಾಗಲೂ ವಿಧೇಯರಾಗಿಯೂ ನಂಬಿಕೆಗೆ ಪಾತ್ರರಾಗಿಯೂ ಇರತಕ್ಕದು. ಮತ್ತು ಅಂತಹ ವಿಧೇಯತೆಯ ಸಂಬಂಧದಿಂದ ಅವರು ಕೇಳಿದ ಸಹಾಯವನ್ನೆಲ್ಲಾ ಮಾಡುತ್ತಿರಬೇಕು.

೫. ಬ್ರಿಟಿಷ್ ಸರಕಾರದವರು, ಮೇಲೆ ಹೇಳಿದ ರಾಜ್ಯಕ್ಕೆ ಹೊರಗಿನಿಂದ ಶತ್ರುಬಾಧೆಯಿಲ್ಲದಿರುವಂತೆ ಕಾಪಾಡುವುದಕ್ಕೂ, ಸಮಯ ಬಂದಾಗ ಇಂಗ್ಲಿಷ್ ಸೈನ್ಯಕ್ಕೆ ಸಹಾಯ ಮಾಡುವುದಕ್ಕಾಗಿ ಸೈನ್ಯಗಳನ್ನು ಇಟ್ಟುಕೊಳ್ಳಬೇಕಾದ ತೊಂದರೆಯನ್ನು ಮೈಸೂರು ಮಹಾರಾಜರಿಗೆ ತಪ್ಪಿಸುವುದಕ್ಕೂ ಒಪ್ಪಿಕೊಂಡಿರುತ್ತಾರೆ. ಇದಕ್ಕಾಗಿ ೧೮೮೧ನೆಯ ಸಂವತ್ಸರದ ಮಾರ್ಚಿ ತಾರೀಖು ೨೫ರ ಮೊದಲುಗೊಂಡು ಮೇಲೆ ಹೇಳಿದ ರಾಜ್ಯ ಉತ್ಪತ್ತಿಯಿಂದ ಬ್ರಿಟಿಷ್ ಸರಕಾರಕ್ಕೆ ವರುಷವೊಂದಕ್ಕೆ ಎರಡು ಕಂತುಗಳಾಗಿ ಮೂವತ್ತೈದು ಲಕ್ಷ ಗವರ್ನಮೆಂಟ್ ರೂಪಾಯಿಗಳನ್ನು ಕೊಡಬೇಕು.

೬. ಮಹಾರಾಜರು ಮೈಸೂರು ದೇಶವನ್ನು ಸ್ವಾಧೀನಕ್ಕೆ ತೆಗೆದುಕೊಂಡು ತಾರೀಖು ಮೊದಲುಗೊಂಡು ಶ್ರೀರಂಗಪಟ್ಟಣದಲ್ಲಿ ಬ್ರಿಟಿಷ್ ಅಧಿಕಾರವು ರದ್ದಾಗತಕ್ಕದು. ಮತ್ತು ಮಹಾರಾಜರು ಇತರ ಭಾಗಗಳನ್ನು ಯಾವ ಕರಾರುಗಳಿಗೆ ಒಳಪಟ್ಟು ಪಡೆದಿರುವರೋ ಅದೇ ಕರಾರಿನಿಂದ ಆ ದ್ವೀಪವನ್ನೂ ಆಳತಕ್ಕದು.

೭. ಮೈಸೂರು ಮಹಾರಾಜರವರು ಗವರ್ನರ್ ಜನರಲ್ ಇನ್ ಕೌನ್ಸಿಲ್‌ರವರ ಮಂಜೂರಾತಿಯಿಲ್ಲದೆ ಹೊಸದಾಗಿ ಕೋಟೆ ಮುಂತಾದುವನ್ನು ಕಟ್ಟಕೂಡದು. ತಮ್ಮ ರಾಜ್ಯದಲ್ಲಿರುವ ಹಳೇಕೋಟೆ ಕೊತ್ತಳಗಳನ್ನು ರಿಪೇರಿ ಮಾಡಿಸಲೂ ಕೂಡದು.

೮. ಮೈಸೂರು ಮಹಾರಾಜರು ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರ ಸಮ್ಮತಿಯಿಲ್ಲದೆ ತಮ್ಮ ರಾಜ್ಯದೊಳಗೆ ಆಯುಧಗಳನ್ನಾಗಲಿ ಮದ್ದು ಗುಂಡುಗಳನ್ನಾಗಲಿ ಸೈನ್ಯಕ್ಕೆ ಬೇಕಾದ ಸಾಮಗ್ರಿಗಳನ್ನಾಗಲಿ ತರಿಸಕೂಡದು. ತರಿಸತಕ್ಕವರಿಗೆ ಅಪ್ಪಣೆಯನ್ನು ಕೊಡಲೂಕೂಡದು. ಮತ್ತು ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರು ಹೇಳಿದಾಗ ತಮ್ಮ ರಾಜ್ಯದ ಯಾವ ಭಾಗದಲ್ಲಾದರೂ ಆಯುಧ, ಮದ್ದು ಗುಂಡು ಮುಂತಾದುವುಗಳು ತಯಾರಾಗುತ್ತಿದ್ದರೆ ಅವುಗಳನ್ನು ನಿಲ್ಲಿಸಬೇಕು.

೯. ತಮ್ಮ ರಾಜ್ಯದಲ್ಲಿ ಯಾವ ಸ್ಥಳದಲ್ಲಾಗಲಿ ಇಂಗ್ಲಿಷ್ ಕಂಟೋನ್ಮೆಂಟುಗಳನ್ನು ಇಡುವುದು ಅಗತ್ಯವೆಂದು ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರಿಗೆ ತೋರಿದಾಗ, ಕಂಟೋನ್ಮೆಂಟುಗಳನ್ನು ಕಟ್ಟುವುದಕ್ಕೆ ಮೈಸೂರು ಮಹಾರಾಜರವರು ಆಕ್ಷೇಪಣೆ ಮಾಡಬಾರದು; ಮತ್ತು ಹಾಗೆ ಕಂಟೋನ್ಮೆಂಟಿಗಾಗಿ ಬೇಕಾಗುವ ಸ್ಥಳವನ್ನು ಖರೀದಿಯಿಲ್ಲದೆ ಕೊಡಬೇಕಲ್ಲದೆ, ಆ ಸ್ಥಳದಲ್ಲಿ ತಮ್ಮ ಆಡಳಿತವನ್ನು ನಿಲ್ಲಿಸಬೇಕು. ಅಂತಹ ಕಂಟೋನ್ಮೆಂಟಿಗೆ ಸೇರಿರುವ ತಮ್ಮ ಸ್ಥಳದಲ್ಲಿ ತಮ್ಮ ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರು ಅಗತ್ಯವೆಂದು ಹೇಳುವ ಆರೋಗ್ಯಕರವಾದ ನಿಬಂಧನೆಗಳನ್ನು ಜಾರಿಯಲ್ಲಿ ತರಬೇಕು. ಅಂತಹ ಕಂಟೋನ್ಮೆಂಟಿನಲ್ಲಿ ಸೈನ್ಯಕ್ಕಾಗಿ ಬೇಕಾಗುವ ಎಲ್ಲಾ ಸಾಮಾನುಗಳ ವಿಷಯದಲ್ಲಿ ಎಲ್ಲಾ ಅನುಕೂಲವನ್ನು ಮಾಡಿಕೊಡಬೇಕು. ಮತ್ತು ಆ ಉದ್ದೇಶದಿಂದ ತರಿಸತಕ್ಕಂತಹ ಅಥವಾ ಕೊಂಡುಕೊಂಡ ಸಾಮಾನುಗಳ ಮೇಲೆ ಬ್ರಿಟಿಷ್ ಸರಕಾರದ ಸಮ್ಮತಿಯಿಲ್ಲದೆ ಯಾವ ವಿಧವಾದ ತೆರಿಗೆಯನ್ನು ಅಥವಾ ಕಂದಾಯವನ್ನು ಹಾಕಕೂಡದು.

೧೦. ಮೈಸೂರು ಸಂಸ್ಥಾನದಲ್ಲಿ ರಾಜ್ಯವನ್ನು ತಹಬಂದಿಯಲ್ಲಿಟ್ಟುಕೊಂಡಿರುವುದಕ್ಕೂ, ಮಹಾರಾಜರ ಮರ್ಯಾದಾರ್ಥವಾಗಿಯೂ, ಮತ್ತು ಗವರ್ನರ್ ಜನರಲ್ ಇನ್ ಕೌನ್‌ಸಿಲ್ ಅವರು ಸಮ್ಮತಿಸುವ ಇತರ ಉಪಯೋಗಕ್ಕಾಗಿಯೂ ಇಡುವ ಮಿಲಿಟೆರಿ ಸೈನ್ಯವು, ಗವರರ್ನರ್ ಜನರಲ್ ಇನ್ ಕೌನ್‌ಸಿಲ್ ಅವರು ಗೊತ್ತು ಮಾಡುವುದಕ್ಕಿಂತಲೂ ಹೆಚ್ಚಾಗಿರಕೂಡದು. ಸೈನ್ಯದ ಜಮಾವಣೆ ಹೆಚ್ಚಿಸುವುದು ಕವಾಯಿತು ಮುಂತಾವುಗಳ ವಿಷಯದಲ್ಲಿ ಗವರ್ನರ್ ಜನರಲ್ ಇನ್ ಕೌನ್‌ಸಿಲ್ ಅವರು ಹೇಳುವ ರೀತಿಯಲ್ಲಿ ನಡಯಿಸತಕ್ಕುದು.

೧೧. ಮೈಸೂರು ಮಹಾರಾಜರವರು ಗವರ್ನರ್ ಜನರಲ್ ಇನ್ ಕೌನ್ಸಿಲ್‌ರವರ ಅನುಮತಿಯಿಂದ ಅವರ ಮೂಲಕವಾಗಿ ಹೊರತು ರಾಜ್ಯದ ಇತರ ಆಡಳಿತದ ವಿಷಯದಲ್ಲಿ ಪ್ರವರ್ತಿಸಕೂಡದು. ಅಥವಾ ಇತರ ರಾಜ್ಯದ ರಾಜರೊಡನೆಯಾಗಲಿ, ಅಥವಾ ಅಧಿಕಾರಿಗಳೊಡನೆಯಾಗಲಿ, ಕಾಗದಪತ್ರಗಳನ್ನು ನಡೆಯಿಸಕೂಡದು.

೧೨. ಮೈಸೂರು ಮಹಾರಾಜರವರು ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರ ಅನುಮತಿಯಲ್ಲದೆ ಇಂಡಿಯಾದೇಶವನಲ್ಲದ ಯಾವ ಮನುಷ್ಯನನ್ನೂ ತಮ್ಮ ನೌಕರಿಯಲ್ಲಿಟ್ಟುಕೊಳ್ಳಕೂಡದು. ಮತ್ತು ಹಾಗೆ ನೌಕರಿಯಲ್ಲಿರುವ ಯಾವ ಮನುಷ್ಯನನ್ನಾದರೂ ಅವರು ಹೇಳಿದ ಪಕ್ಷದಲ್ಲಿ ಕೆಲಸದಿಂದ ನಿವೃತ್ತಿಮಾಡಬೇಕು.

೧೩. ಬ್ರಿಟಿಷ್ ಇಂಡಿಯಾ ಗವರ್ನಮೆಂಟಿನವರ ನಾಣ್ಯವು ಚಲಾವಣೆಯಲ್ಲಿರುವವರೆಗೂ ಮೈಸೂರು ದೇಶದಲ್ಲಿಯೂ ಅದೇ ನಾಣ್ಯವು ಚಲಾವಣೆಯಲ್ಲಿರತಕ್ಕುದು. ಬ್ರಿಟಿಷ್ ಇಂಡಿಯಾದ

ಅಥವಾ ತಮ್ಮ ಸೀಮೆಯೊಳಕ್ಕೆ ತರಿಸಿಕೊಳ್ಳುವ ವಿಷಯದಲ್ಲಾಗಲಿ ಅವರು ಯೋಗ್ಯವೆಂದು ಹೇಳುವ ಎಲ್ಲಾ ಕಾನೂನುಗಳನ್ನೂ ಜಾರಿಯಲ್ಲಿ ತರತಕ್ಕುದು.

೧೯. ಮಹಾರಾಜ ಚಾಮರಾಜೇಂದ್ರ ಒಡೆಯರವರಿಗೆ ರಾಜ್ಯವನ್ನು ಒಪ್ಪಿಸುವಾಗ, ಸದರಿ ಸೀಮೆಯಲ್ಲಿ ಜಾರಿಯಲ್ಲಿದ್ದ ಎಲ್ಲಾ ಕಾಯಿದೆ ಕಾನೂನುಗಳನ್ನು ಜಾರಿಯಲ್ಲಿಟ್ಟು ಅದರಂತೆಯೇ ಕೆಲಸ ನಡಿಸತಕ್ಕುದು. ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರ ಸಮ್ಮತಿಯಿಲ್ಲದೆ ಮೈಸೂರು ಮಹಾರಾಜರವರು ಆ ಕಾಯಿದೆ ಕಾನೂನುಗಳನ್ನು ವಜಾ ಮಾಡಕೂಡದು: ಅಥವಾ ಅದಕ್ಕೆ ವಿರುದ್ಧವಾದ ಯಾವ ಕಾಯಿದೆಯನ್ನು ಜಾರಿಯಲ್ಲಿ ತರಕೂಡದು.

೨೦. ಮಹಾರಾಜ ಚಾಮರಾಜೇಂದ್ರ ಒಡೆಯರವರಿಗೆ ರಾಜ್ಯವನ್ನು ಕೊಟ್ಟಾಗ ಸದರಿ ಸೀಮೆಯಲ್ಲಿ ಜಾರಿಯಲ್ಲಿದ್ದ ರಾಜ್ಯದಾಡಳಿತದಲ್ಲಿ ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರ ಸಮ್ಮತಿಯಿಲ್ಲದೆ ಯಾವ ದೊಡ್ಡ ಬದಲಾವಣೆಯನ್ನೂ ಮಾಡಕೂಡದು.

೨೧. ಮೇಲ್ಕಂಡ ಸೀಮೆಯಲ್ಲಿ ಬ್ರಿಟಿಷರ ಆಳಿಕೆಯಲ್ಲಿ ಮಾಡಿದ ರೆವಿನ್ಯೂ ಸೆಟಲ್ಮೆಂಟುಗಳನ್ನೂ, ಕೊಡಲ್ಪಟ್ಟಿದ್ದ ಎಲ್ಲಾ ಸನ್ನದುಗಳನ್ನೂ, ಸಮರ್ಥರಾದ ಲಾಕೋರ್ಟಿನಿಂದಾಗಲಿ, ಅಥವಾ ಗವರನರ್ ಜನರಲ್ ಇನ್ ಕೌನ್‌ಸಿಲ್‌ರವರ ಅನುಮತಿಯಿಂದಾಗಲಿ ವಜಾಮಾಡಲ್ಪಟ್ಟು ಅಥವಾ ಬದಲಾಯಿಸಲ್ಪಟ್ಟರೆ ಹೊರತು ಇಲ್ಲವಾದರೆ, ೧೮೮೧ನೆಯ ಇಸವಿ ಮಾರ್ಚ ತಾರೀಖು ೨೫ನೆಯ ದಿವಸ ಜಾರಿಯಲ್ಲಿದ್ದಂತೆ ಆಯಾ ಷರತ್ತಿಗೆ ಸರಿಯಾಗಿ ನಡಿಯಿಸಿಕೊಂಡು ಬರತಕ್ಕುದು.

೨೨. ಮೈಸೂರು ಮಹಾರಾಜರವರು ತಮ್ಮ ಹಣದ ಆಡಳಿತದ ಬಗ್ಗೆ ರೆವಿನ್ಯು ವಸೂಲ್ಮಾಡುವುದು, ತೆರಿಗೆ ಹಾಕುವುದು, ನ್ಯಾಯವಿಚಾರಣೆ, ವ್ಯಾಪಾರಾಭಿವೃದ್ಧಿ, ಕೃಷಿ, ಕೈಗಾರಿಕೆ ಮುಂತಾದವುಗಳ ಪ್ರೋತ್ಸಾಹ ಮತ್ತು ಮಹಾರಾಜರವರ ಉತ್ತರೋತ್ತರ ಶ್ರೇಯೋಭಿವೃದ್ಧಿ, ಅವರ ಪ್ರಜೆಗಳ ಸೌಖ್ಯ, ಅವರಿಗೂ ಬ್ರಿಟಿಷ್ ಸರಕಾರಕ್ಕೂ ಇರುವ ಸಂಬಂಧ, ಇವುಗಳ ವಿಷಯವಾಗಿ ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರು ಹೇಳುವ ಬುದ್ಧಿವಾದಗಳನ್ನು ನಡೆಯಿಸಬೇಕು.

೨೩. ಮೈಸೂರು ಮಹಾರಾಜರವರು ಮೇಲೆ ಹೇಳಿದ ಷರತ್ತುಗಳಿಗೆ ತಪ್ಪಿದರೂ ಅಥವಾ ಅದರಂತೆ ನಡೆಯಿಸದಿದ್ದರೂ ಅವರ ಸೀಮೆಯನ್ನು ವಾಪಸುತೆಗೆದುಕೊಂಡು ಸ್ವತಂತ್ರವಾಗಿ ಆಳುವುದಕ್ಕೂ ಅಥವಾ ಮೈಸೂರು ಜನಗಳ ಸತ್ಪಾಲನೆಗೂ ಸದರಿ ಸೀಮೆಯಲ್ಲಿ ಇಂಗ್ಲಿಷರ ಹಕ್ಕನ್ನು ಸ್ಥಾಪಿಸಿಕೊಳ್ಳುವುದಕ್ಕೂ ಅಗತ್ಯವಾಗಿ ಕಂಡುಬರುವ ಯಾವ ವಿಧವಾದ ಏರ್ಪಾಡುಗಳನ್ನಾದರೂ ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರು ಮಾಡಬಹುದು.

೨೪. ಬ್ರಿಟಿಷ್ ಸರಕಾರಕ್ಕೂ ಮೈಸೂರು ಸೀಮೆಗೂ ಇರುವ ಸಂಬಂಧವನ್ನು ನಮೂದಿಸುವುದಕ್ಕಾಗಿ ಇದಕ್ಕೆ ಮೊದಲು ಹುಟ್ಟಿರುವ ಎಲ್ಲಾ ಕಾಗದಪತ್ರಗಳೂ ಇದರಿಂದ ರದ್ದಾಗಿರುತ್ತದೆ. ಮೇಲೆ ಹೇಳಿದ ಷರತ್ತುಗಳಂತೆ ಮಹಾರಾಜರವರು ನಡೆದುಕೊಂಡರೇ ಇಲ್ಲವೇ ಎಂದಾಗಲಿ, ಅಥವಾ ರಾಜ್ಯಕ್ಕೆ ಹಕ್ಕುದಾರರು ಯಾರೆಂದಾಗಲೀ, ಆಳುವುದಕ್ಕೆ ಯಾರು ಯೋಗ್ಯರೆಂದಾಗಲಿ, ವಿವಾದ ಬಂದಾಗ ಆ ವಿಷಯದಲ್ಲಿ ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರು ಮಾಡುವ ತೀರ್ಮಾನವೇ ಕಡೆಯದಾಗಿರುತ್ತದೆ.

ವಿಲಿಯಂ ಕೋಟೆ
೧ನೆಯ ಮಾರ್ಚಿ ೧೮೮೧ನೆಯ ಇಸವಿ.

ರಿಪ್ಪನ್
ಇಂಡಿಯಾದೇಶದ ವೈಸ್ರಾಯಿ
ಮತ್ತು ಗವರ್ನರ್ ಜನರಲ್‌ರವರು

ಈ ತಹನಾಮೆಯನ್ನು ಮಹಾರಾಜರವರ ಕಡೆ ಅಭಿಭಾವಕರಾಗಿದ್ದವರು ಒಪ್ಪಿದ ಬಳಿಕ, ಅದೇ ಮಾರ್ಚಿ ತಿಂಗಳು ೨೫ನೆಯ ದಿನ ಪ್ರಾತಃಕಾಲದಲ್ಲಿ ಶ್ರೀಚಾಮರಾಜೇಂದ್ರ ಒಡೆಯರವರಿಗೆ ರಾಜ್ಯಾಭಿಷೇಕವು ನಡೆಯತಕ್ಕದೆಂದು ನಿರ್ಧಾರವಾಯಿತು. ಇದಕ್ಕಾಗಿ ಅರಮನೆಯೂ ನಗರವೂ ಶೋಭಾಯಮಾನವಾಗಿ ಅಲಂಕರಿಸಲ್ಪಟ್ಟುವು. ಈ ದಿವ್ಯಮಹೋತ್ಸವವನ್ನು ನೆರವೇರಿಸಲು ಮದರಾಸು ಗವರ್ನರವರಾದ ಆಡಂಸಾಹೇಬರು ಇಂಡಿಯಾ ದೇಶದ ವೈಸ್ರಾಯಿ ಗವರ್ನರ್ ಜನರಲ್‌ರವರ ಪ್ರತಿನಿಧಿಯಾಗಿ ರಾಜಧಾನಿಗೆ ದಯಮಾಡಿಸಿದರು. ಪಟ್ಟಾಭಿಷೇಕ ದಿನದ ಪ್ರಾತಃಕಾಲ ಬಕ್ಷಿ ಬಸಪ್ಪಾಜಿ ಅರಸಿನವರೇ ಮುಂತಾದ ಸೇನಾಪತಿಗಳೆಲ್ಲರೂ ಸೂರ್ಯೋದಯಕ್ಕೆ ಮುಂಚಿತವಾಗಿ ತಮ್ಮ ತಮ್ಮ ಸೈನ್ಯಗಳನ್ನೆಲ್ಲ ಸಿದ್ಧಪಡಿಸಿಕೊಂಡು ಅರಮನೆಯ ಮುಂದುಗಡೆ ಬಂದು ನಿಂತರು. ಪ್ರಾತಃಕಾಲ ಏಳುಗಂಟೆಗೆ ಸರಿಯಾಗಿ ಮದರಾಸು ಗವರ್ನರವರು ಸಪರಿವಾರವಾಗಿ ಅರಮನೆಗೆ ದಯಮಾಡಿಸಿ, ಶ್ರೀ ಚಾಮರಾಜೇಂದ್ರ ಒಡೆಯರಿಗೆ ರಾಜ್ಯವನ್ನು ಒಪ್ಪಿಸುವುದಕ್ಕೋಸ್ಕರ ಸಂಸ್ಥಾನದ ಮಹಾಜನ ಸಭೆಯನ್ನು ಕೂಡಿಸಿದರು. ಆ ಸಭಾಭವನದ ಮಧ್ಯದಲ್ಲಿ ವಿಸ್ತಾರವಾಗಿಯೂ ಎತ್ತರವಾಗಿಯೂ ಇರುವಂತೆ ಪೀಠವನ್ನು ಕಲ್ಪಿಸಿದ್ದರು. ಅದರ ಮೇಲೆ ಮಧ್ಯದಲ್ಲಿ ಗವರ್ನರವರೂ ಅವರ ಬಲಗಡೆಯಲ್ಲಿ ಶ್ರೀಮನ್ಮಹಾರಾಜರವರೂ ಗವರ್ನರವರ ಎಡಗಡೆಯಲ್ಲಿ ಚೀಫ್ ಕಮೀಷನರವರೂ ದಿವ್ಯಾಸನಾಸೀನರಾದರು. ಬ್ರಿಟಿಷ್ ಕಮ್ಯಾಂಡರ್ ಇನ್ ಚೀಫ್‌ರವರೂ, ಸಿವಿಲ್ ಮಿಲಿಟೆರಿ ಅಧಿಕಾರಿಗಳೂ ಚೀಫ್ ಕಮೀಷನವರ ಎಡಗಡೆಯಲ್ಲಿಯೂ, ಮೈಸೂರು ರಾಜಬಂಧುಗಳೂ ಅಧಿಕಾರಿಗಳೂ ದೇಶೀಯ ದೊಡ್ಡಮನುಷ್ಯರೂ ಮಹಾರಾಜರವರ ಬಲಗಡೆಯಲ್ಲಿಯೂ ಕುಳಿತರು.

ಮದರಾಸು ಗವರ್ನರವರು ಮಹಾರಾಜರವರಿಗೆ ಮೈಸೂರು ರಾಜ್ಯಭಾರವನ್ನು ಒಪ್ಪಿಸತಕ್ಕ ಮಹೋತ್ಸವ ಕಾಲದಲ್ಲಿ ವೈಸ್ರಾಯಿ ಗವರ್ನರ್ ಜನರಲ್‌ರವರಿಗೆ ಪ್ರತಿನಿಧಿಯಾಗಿ ತಾವು ಬಂದಿರುವಂತೆ ತಿಳಿಸಿ, ಮದರಾಸು ಗವರ್ನಮೆಂಟಿನ ಪೊಲಿಟಿಕಲ್ ಇಲಾಖಾ ಸೆಕ್ರೆಟೆರಿಯವರಿಗೆ ಈ ಮುಂದೆ ಹೇಳುವ ಪ್ರಕಟನ ಪತ್ರಿಕೆಯನ್ನು ಓದುವಂತೆ ಆಜ್ಞೆ ಮಾಡಿದರು. ಅವರು ಹೀಗೆ ಓದತೊಡಗಿದರು.

"ಇಂಡಿಯಾ ದೇಶದ ವೈಸ್ರಾಯಿ ಮತ್ತು ಗವರ್ನರ್ ಜನರಲ್ ಇನ್ ಕೌನ್ಸಿಲ್‌ರವರು ೧೮೬೭ನೆಯ ಇಸವಿಯಲ್ಲಿ ಮೈಸೂರು ದೇಶದ ಮುಖ್ಯಸ್ಥರಿಗೂ ಪ್ರಜೆಗಳಿಗೂ ಪ್ರಸಿದ್ಧಿಪಡಿಸಿದ ಇಸ್ತಿಹಾರಿನಲ್ಲಿ, ಗತಿಸಿದ ಮಹಾರಾಜ ಕೃಷ್ಣರಾಜ ಒಡೆಯರ್ ಬಹದ್ದೂರ್ ರವರ ಸ್ವೀಕೃತ ಪುತ್ರರಾದ ಶ್ರೀಚಾಮರಾಜೇಂದ್ರ ಒಡೆಯರ್ ಬಹದ್ದೂರ್‌ರವರು ಸದರಿ ಮಹಾರಾಜ ಕೃಷ್ಣರಾಜ ಒಡೆಯರ್ ಬಹದ್ದೂರವರ ಸ್ಥಾನವನ್ನು ಹೊಂದತಕ್ಕವರೆಂದು ಇಂಡಿಯಾ ಗವರ್ನಮೆಂಟಿನಿಂದ ಅಂಗೀಕರಿಸಲ್ಪಟ್ಟಿದ್ದಾಗಿ ಪ್ರಕಟಿಸಿರುವುದಲ್ಲದೆ. ಮಹಾರಾಜರಿಗೆ ಪ್ರಾಪ್ತವಯಸ್ಸು ಬಂದನಂತರ ಆಗಿನ [illegible] ರಾಜ್ಯದ

ಆಳ್ವಿಕೆಯು ಅವರಿಗೆ ಒಪ್ಪಿಸಲ್ಪಡುವುದೆಂದು ತಿಳಿಸಿರುತ್ತಾರಷ್ಟೆ. ಆದುದರಿಂದ ಈಗ ಘನತೆಯನ್ನು ಹೊಂದಿದ ಗ್ರೇಟ್ ಬ್ರಿಟನ್ ಮತ್ತು ಐರ್ಲೆಂಡ್ ದೇಶಗಳ ರಾಜ್ಞಿಯವರಾದ ಇಂಡಿಯಾ ದೇಶದ ಚಕ್ರವರ್ತಿನಿಯವರ ಆಜ್ಞಾನುಸಾರ ಇಂಡಿಯಾ ದೇಶದ ವೈಸ್ರಾಯಿ ಮತ್ತು ಗವರ್ನರ್ ಜನರಲ್ ಇನ್ ಕೌನ್ಸಿಲ್‌ರವರು ಮೈಸೂರು ದೇಶದ ಮುಖ್ಯಸ್ಥರಿಗೂ ಪ್ರಜೆಗಳಿಗೂ ತಿಳಿಯಪಡಿಸುವುದೇನೆಂದರೆ: ಮೈಸೂರು ಸೀಮೆಯನ್ನು ಮಹಾರಾಜ ಚಾಮರಾಜೇಂದ್ರ ಒಡೆಯರ್ ಬಹದ್ದೂರವರ ಸ್ವಾಧೀನಮಾಡಿ ಆ ರಾಜ್ಯದ ಆಳಿಕೆಯು ಅವರಿಗೆ ಒಪ್ಪಿಸಿರುತ್ತದೆ. ಇಂಡಿಯಾ ದೇಶದ ವೈಸ್ರಾಯಿ ಮತ್ತು ಗವರ್ನರ್ ಜನರಲ್ ಇನ್ ಕೌನ್ಸಿಲ್‌ರವರು ಮೈಸೂರು ದೇಶದ ಮುಖ್ಯಸ್ಥರಿಗೂ ಪ್ರಜೆಗಳಿಗೂ ಮತ್ತೂ ತಿಳಿಯಪಡಿಸುವುದೇನೆಂದರೆ: ಸದರಿ ಮೈಸೂರು ಸೀಮೆಯಲ್ಲಿ ಬ್ರಿಟಿಷ್ ಗವರ್ನಮೆಂಟಿನವರ ಆಡಳಿತವು ಈ ದಿವಸಕ್ಕೆ ಅಖೈರಾಗಿ ನಿಂತುಹೋಗಿರುತ್ತದೆ.

"ಇಂಡಿಯಾ ದೇಶದ ವೈಸ್ರಾಯಿ ಮತ್ತು ಗವರ್ನರ್ ಜನರಲ್ ಇನ್ ಕೌನ್ಸಿಲ್‌ರವರ ಅಜ್ಞೆಯ ಪ್ರಕಾರ".

ಮೇಲೆ ಹೇಳಿದ ಪ್ರಕಟನೆಯನ್ನು ಓದಿದ ಬಳಿಕ, ಮದರಾಸು ಗವರ್ನರವರು ಮಹಾರಾಜ ರವರನ್ನು ಕುರಿತು ಭಾಷಿಸಿದುದೇನೆಂದರೆ:-"ಮೈಸೂರು ಮಹಾರಾಜ ಚಾಮರಾಜೇಂದ್ರ ಒಡೆಯರ್ ಬಹದ್ದೂರವರೇ, ನಾನು ಇಂಡಿಯಾ ದೇಶದ ಗವರ್ನರ್ ಜನರಲ್‌ರವರಿಗೆ ಪ್ರತಿನಿಧಿಯಾಗಿ ಬಂದು, ಈಗತಾನೆ ಓದಿದ ರಾಜ ಶಾಸನಕ್ಕನುಗುಣವಾಗಿ ಮೈಸೂರು ಸೀಮೆಯ ರಾಜ್ಯಭಾರ ವನ್ನು ನಿಮಗೆ ಒಪ್ಪಿಸಿರುತ್ತೇನೆ. ಇಂತಹ ಶುಭ ಸಮಯದಲ್ಲಿ ನನಗುಂಟಾದ ಆನಂದಾತಿಶಯ ವನ್ನು ತಮಗೆ ತಿಳಿಸಬೇಕಾಗಿದೆ. ಇಂಡಿಯಾ ಚಕ್ರವರ್ತಿನಿಯವರು, ವೈಸ್ರಾಯರವರು ಮತ್ತು ಈ ದಿನ ಇಲ್ಲಿಗೆ ದಯೆಮಾಡಿಸಿರುವವರು ಇವರೆಲ್ಲರ ಪಕ್ಷವಾಗಿ ನಾನು ತಿಳಿಸಬೇಕಾದುದೇ ನೆಂದರೆ: ನೀವು ಉತ್ತರೋತ್ತರ ಶ್ರೇಯೋಭಿವೃದ್ಧಿ ಯುಳ್ಳವರಾಗಿ ಶಾಂತಚಿತ್ತರೂ ಸುಖಿಗಳೂ ಸಂತೃಪ್ತರೂ ಆದ ಪ್ರಜೆಗಳನ್ನು ದೀರ್ಘಕಾಲ ಪರಿಪಾಲನೆ ಮಾಡುವಂತೆ ಭಗವಂತನು ಕರುಣಿಸಲೆಂದು ಬಯಸುತ್ತೇನೆ. ಇಂಡಿಯಾ ಚಕ್ರವರ್ತಿನಿಯವರು ೧೮೫೭ನೆಯ ಇಸವಿಯಲ್ಲಿ ಹಿಂದೂಸ್ಥಾನದ ರಾಜಪುತ್ರರಿಗೂ ರಾಜರಿಗೂ ಪ್ರಜೆಗಳಿಗೂ ಪ್ರಕಟಿಸಿದ ಪ್ರಸಿದ್ಧಿ ಪತ್ರಿಕೆಯಲ್ಲಿ ತಾವು ಅಪ್ಪಣೆಕೊಡಿಸಿರುವ ಮಾತುಗಳನ್ನು ಸರ್ವದಾ ಸ್ಮರಿಸಿಕೊಂಡು, ಆ ಪ್ರಕಟನೆಯಲ್ಲಿರುವ ಯಾವ ಮಾತಿಗೂ ಸ್ವಲ್ಪವೂ ತಪ್ಪದೆ ಅದರಂತೆಯೇ ನಡೆದುಕೊಳ್ಳುತ್ತಾರೆಂಬ ಅವರ ಉದಾರ ಭಾವಕ್ಕೆ ಈ ದಿನ ನಾವು ನಡೆಯಿಸುತ್ತಿರುವ ಮಹೋತ್ಸವವೇ ಪ್ರತ್ಯಕ್ಷ ದೃಷ್ಟಾಂತವಾಗಿದೆ. ಶ್ರೀಮನ್ಮಹಾರಾಜ್ಞೀ ಸರಕಾರದವರು ಈಗ ತಮಗೆ ಒಪ್ಪಿಸಿರುವ ರಾಜ್ಯಭಾರದ ಗೌರವವೂ-ಜವಾಬ್ದಾರಿಯೂ ತಮಗೂ ಇಂಡಿಯಾ ಚಕ್ರವರ್ತಿನಿಯವರಿಗೂ ವೈಸ್ರಾಯರವರಿಗೂ ತಿಳಿದ ವಿಷಯಗಳೇ ಆಗಿವೆ. ಆದರೆ ನೀವು ನಿಮ್ಮ ಮೇಲೆ ಬೀಳುವ ಮಹಾಕರ್ತವ್ಯಗಳ ಭಾರವನ್ನು ವಹಿಸುವುದಕ್ಕೆ ತಕ್ಕ ಸಾಮರ್ಥ್ಯವನ್ನು ಪಡೆಯಲುದ್ಯುಕ್ತರಾಗಿರುವಿರಲ್ಲದೆ, ಮೈಸೂರು ಚೀಫ್ ಕಮೀಷನರಾಗಿರುವ ಜೆ.ಡಿ. ಗಾರ್ಡನ್‌ರವರು ತೋರಿಸಿದ ಪ್ರಕಾರ ಸಕಲ ರಾಜನೀತಿಗಳನ್ನೂ

ತಿಳಿದಿರುವಿರೆಂಬಂಶವನ್ನು ವೈಸ್ರಾಯರವರೂ ಚಕ್ರವರ್ತಿನಿಯವರು ಚೆನ್ನಾಗಿ ಬಲ್ಲರು. ರಾಜನೀತಿ ವಿದ್ಯಾಭ್ಯಾಸದಲ್ಲಿ ನೀವು ತೋರಿಸಿರುವ ಆಸಕ್ತಿಯಿಂದಲೂ ನಿಮ್ಮ ಧೀರೋದಾತ್ತ ಲಕ್ಷಣದಿಂದಲೂ ಸಚ್ಚರಿತ್ರದಿಂದಲೂ ಮುಂದೆ ವಿವೇಕೌದಾರ್ಯ, ನಾಗರಿಕತಾದಿ ಗುಣಭರಿತರಾದ ಪ್ರಭುಗಳೆನ್ನಿಸಿಕೊಳ್ಳುವಿರೆಂಬುದಕ್ಕೆ ಬೇಕಾದ ನಿದರ್ಶನಗಳನ್ನೆಲ್ಲ ತೋರ್ಪಡಿಸಿರುವಿರಿ. ಆದುದರಿಂದ ನಾನು ನಿಮ್ಮ ಸದ್ಗುಣಗಳಲ್ಲಿ ತುಂಬಾ ಭರವಸೆಯುಳ್ಳವನಾಗಿ ನಿಮ್ಮ ಸಂಸ್ಥಾನದ ಅಧಿಕಾರಿಗೂ ಪ್ರಜೆಗಳೂ ನಿಮ್ಮಲ್ಲಿ ಕೇವಲ ಮಮತೆಯುಳ್ಳವರೂ ಬ್ರಿಟಿಷ್ ಸರಕಾರದ ವಿಷಯದಲ್ಲಿ ಕೇವಲ ರಾಜಭಕ್ತಿಯುಳ್ಳವರೂ ಆಗಿದ್ದಾರೆಂದು ನಂಬಿ, ಇಂಡಿಯಾ ದೇಶದ ಗವರ್ನರ್ ಜನರಲ್‌ನವರಿಗೆ ಪ್ರತಿನಿಧಿಯಾಗಿ ಬಂದು, ಈ ಸಂಸ್ಥಾನದಲ್ಲಿ ಬ್ರಿಟಿಷ್ ಅಧಿಕಾರವನ್ನು ನಿಲ್ಲಿಸಿ ರಾಜ್ಯಭಾರವನ್ನು ನಿಮ್ಮ ವಶಪಡಿಸುವ ರಾಜಶಾಸನವನ್ನು ಒಪ್ಪಿಸಿರುತ್ತೇನೆ. ನಾವುನಾವು ಯಾವ ಮತದವರಾಗಿದ್ದರೂ ನಮ್ಮೆಲ್ಲರನ್ನೂ ಈಕ್ಷಿಸಿ ರಕ್ಷಿಸತಕ್ಕವನಾದ ಭಗವಂತನು ನೀವು ತೊಡಗುವ ಸಕಲ ಕಾರ್ಯಗಳಲ್ಲಿಯೂ ನಿಗೆ ಮಾರ್ಗದರ್ಶಿಯಾಗಿದ್ದುಕೊಂಡು ನಾವುಗಳೆಲ್ಲ ಈ ದಿನ ಜರುಗಿಸುವ ಮಹತ್ಕಾರ್ಯವನ್ನು ಸಾಫಲ್ಯಗೊಳಿಸಿ ರಕ್ಷಿಸಬೇಕೆಂಬುದಾಗಿ ಪ್ರಾರ್ಥಿಸುತ್ತೇನೆ."

ಈ ಭಾಷಣವಾದ ಬಳಿಕ ಗವರ್ನರವರು ಮಹಾರಾಜರವರಿಗೆ ತಹನಾಮೆಯನ್ನು ಕೊಟ್ಟು, ವೈಸ್ರಾಯಿ ಗವರ್ನರ್ ಜನರಲ್‌ರವರು ಕಳುಹಿಸಿದ್ದ ಖಿಲ್ಲತ್ತುಗಳನ್ನು ಒಪ್ಪಿಸಿದರು. ಅವುಗಳನ್ನು ಸ್ವೀಕರಿಸಿದ ಬಳಿಕ, ಶ್ರೀಮನ್ಮಹಾರಾಜವರು ಅಪ್ಪಣೆಕೊಡಿಸಿದುದೇನೆಂದರೆ: "ಮಹಾಪ್ರಭುಗಳೇ, ಇಂಡಿಯಾ ಚಕ್ರವರ್ತಿನಿಯವರು ನಮ್ಮ ರಾಜಕುಟುಂಬವನ್ನು ಏಕಪ್ರಕಾರವಾದ ಉದಾರತೆಯಿಂದಲೂ ದಯೆಯಿಂದಲೂ ನಡೆಯಿಸಿಕೊಂಡು ಬರುತ್ತಿರುವರೆಂಬ ಅಂಶವು ನನಗೆ ಚೆನ್ನಾಗಿ ತಿಳಿದಿದೆ.

ಇಂಡಿಯಾ ಚಕ್ರವರ್ತಿನಿಯವರು ನನ್ನ ಪೂರ್ವಿಕರಿಗೆ ಸೇರಿದ ಈ ರಾಜ್ಯಕ್ಕೆ ಪ್ರಭುವಾಗಿರುವಂತೆ ನನಗೆ ರಾಜ್ಯಾಭಿಷೇಕ ಮಾಡಿದುದರಿಂದ, ಬ್ರಿಟಿಷ್ ಸರಕಾರದವರಿಂದ ಮೈಸೂರು ರಾಜವಂಶದವರು ಯಾವಾಗಲೂ ಪಡೆಯುತ್ತಿರುವ ನ್ಯಾಯಕ್ಕೂ ಉದಾರತ್ವಕ್ಕೂ ಮತ್ತೊಂದು ನಿದರ್ಶನವನ್ನು ಕೊಟ್ಟಂತಾಯಿತು. ಇದರಿಂದ ಬ್ರಿಟಿಷ್ ಸರಕಾರದ ವಿಷಯದಲ್ಲಿ ನನಗುಂಟಾಗಿರುವ ಕೃತಜ್ಞಪೂರ್ವಕವಾದ ರಾಜಭಕ್ತಿಮಮತೆಗಳನ್ನೂ, ಅವರು ನನ್ನಲ್ಲಿಟ್ಟಿರುವ ನಂಬಿಕೆಗೆ ನಾನು ಪಾತ್ರನೆಂದು ತೋರಿಸಿಕೊಳ್ಳುವುದಕ್ಕೂ ಪ್ರಜೆಗಳ ಸೌಖ್ಯವನ್ನು ವೃದ್ಧಿಗೊಳಿಸುವುದಕ್ಕೂ ಸದಾ ಪ್ರಯತ್ನಿಸುತ್ತಿರುವೆಂದು ಮಾಡುವ ಈ ನನ್ನ ವಾಗ್ದಾನವನ್ನು ತಾವು ಇಂಡಿಯಾ ಚಕ್ರವರ್ತಿನಿಯವರಿಗೆ ತಿಳುಹಿಸಬೇಕೆಂದು ಪ್ರಾರ್ಥಿಸುತ್ತೇನೆ. ಈ ಉತ್ಸವ ಸಮಯದಲ್ಲಿ ನನ್ನ ವಿಷಯದಲ್ಲಿ ತಾವು ತೋರಿಸಿದ ಆದರಕ್ಕಾಗಿ ನಾನು ಅರ್ಪಿಸುವ ವಂದನೆಗಳನ್ನು ಸ್ವೀಕರಿಸಬೇಕೆಂದು ಕೇಳಿಕೊಳ್ಳುತ್ತೇನೆ".

ಈ ರೀತಿಯಾಗಿ ಶ್ರೀಮನ್ಮಹಾರಾಜರವರು ಅಪ್ಪಣೆ ಕೊಡಿಸಿದ ಮೇಲೆ ಆಗತಾನೆ ವೈಸ್ರಾಯರವರಿಂದ ಬಂದ ಒಂದು ತಂತೀವರ್ತಮಾನವೂ ಓದಲ್ಪಟ್ಟಿತು. ಅದೆಂತೆಂದರೆ

"ಆಳಿದ ಮಹಾಸ್ವಾಮಿಯವರಾದ ನಿಮಗೆ ರಾಜ್ಯಾಭಿಷೇಕವಾದುದರಿಂದ ಶ್ರೀಮನ್ಮಹಾರಾಜ್ಞಿ ಇಂಡಿಯಾ ಚಕ್ರವರ್ತಿನಿಯವರಿಗುಂಟಾದ ಸಂತೋಷಾತಿಶಯವನ್ನೂ, ನೀವೂ ನಿಮ್ಮ ದೇಶವೂ ಶ್ರೇಯೋಭಿವೃದ್ಧಿಯನ್ನು ಪಡೆಯಬೇಕೆಂದು ಅವರಿಗಿರುವ ಕೋರಿಕೆಯನ್ನೂ ನಿಮಗೆ ತಿಳಿಸುವಂತೆ ನಾನು ಆಜ್ಞಪ್ತನಾಗಿರುವೆನು. ಇದಲ್ಲದೆ, ಚಕ್ರವರ್ತಿನಿಯವರು ತಮಗೆ ನಿಮ್ಮಿಂದ ಬಂದು ತಲುಪಿದ ರಾಜಭಕ್ತಿ ವಿಶ್ವಾಸಸೂಚಕವಾದ ತಂತೀ ಸಮಾಚಾರಕ್ಕೋಸ್ಕರ ವಿಶೇಷವಾಗಿ ವಂದಿಸಿದೆವೆಂದು ನಿಮಗೆ ತಿಳಿಸುವಂತೆ ನನಗೆ ಆಜ್ಞೆ ಮಾಡಿರುವರು."

ಈ ಅಭಿನಂದನರೂಪವಾದ ಪತ್ರಿಕೆಯನ್ನು ಓದಿದಕೂಡಲೆ ಅಧಿಕಾರಿಗಳ ಜಯಜಯ ಧ್ವನಿಯೂ ಮೊರೆಯುವ ಮಂಗಳವಾದ್ಯವೂ ಸಿಪಾಯಿಗಳ ಬಂದೂಕಗಳೇ "ಸುರುಟೂ" ಭೂಮ್ಯಂತರಿಕ್ಷಗಳನ್ನು ಪ್ರತಿಧ್ವನಿಗೊಳಿಸಿದುವು. ಆಸ್ಥಾನದಲ್ಲಿದ್ದ ಅಧಿಕಾರಿಗಳೆಲ್ಲರೂ ಮಹಾರಾಜರ ಮೇಲೆ ಪುಷ್ಪವೃಷ್ಟಿಯನ್ನು ವರ್ಷಿಸಿ ಕಾಣಿಕೆಯನ್ನೊಪ್ಪಿಸಿ ಮುಜರೆ ಮಾಡಿದರು. ಆಗ ವರ್ಷಾಕಾಲವಲ್ಲದಿದ್ದರೂ ಶ್ರೀಮನ್ಮಹಾರಾಜರವರ ಆಳ್ವಿಕೆಯಿಂದ ಪ್ರಜಾನಿಕರಕ್ಕೆ ಮುಂದಾಗುವ ಕ್ಷೇಮಲಾಭವನ್ನು ಸೂಚಿಸುವುದೋ ಎಂಬಂತೆ ಶುಭ ಸೂಚಕವಾದ ಸುವೃಷ್ಟಿಯೂ ಆಯಿತು. ಸುಮಾರು ಐವತ್ತು ವರುಷಗಳವರೆಗೆ ಕೈತಪ್ಪಿದ್ದ ರಾಜ್ಯವು ತಿರುಗಿ ದೇಶೀಯ ರಾಜರ ಅನುಭವಕ್ಕೆ ಬಂದುದಕ್ಕಾಗಿ ದೇಶವತ್ಸಲರಾದ ಪ್ರಜೆಗಳೆಲ್ಲರೂ ಅನಿರ್ವಚನೀಯವಾದ ಆನಂದದಿಂದ ತಮ್ಮ ಭಕ್ತಿ ಸಂತೋಷ ಕೃತಜ್ಞತಾಸೂಚಕವಾದ ವಿಜ್ಞಾಪನಾಪತ್ರಿಕೆಯಿಂದ ಲಾರ್ಡ್ ರಿಪ್ಪನ್ ಪ್ರಭುಗಳನ್ನೂ ಆಡಂ ಸಾಹೇಬರನ್ನೂ ಕೊಂಡಾಡಿದರು.

ಈ ನಡುವೆ ಎಂದರೆ ಮಾರ್ಚಿ ತಾರೀಖು ೧೧ರಲ್ಲಿ ಶ್ರೀಮನ್ಮಹಾರಾಜರವರಿಗೆ ಜ್ಯೇಷ್ಠಪುತ್ರಿಕೋತ್ಸವಾನಂದವು ಒದಗಿತು. ಇವರಿಗೆ ಜಯಲಕ್ಷ್ಮಮ್ಮಣ್ಣಿಯವರೆಂದು ನಾಮಕರಣ ಮಾಡಿದರು.

ರಾಜರ ಸಂಪತ್ತಿಗೆ ಕಲ್ಪವೃಕ್ಷಪ್ರಾಯರಾಗಿರುವ ಪ್ರಜೆಗಳನ್ನು ಧರ್ಮದಿಂದ ಪರಿಪಾಲನೆ ಮಾಡುವುದೇ ಪ್ರಭುಗಳ ಧರ್ಮವಾಗಿದೆ. ಅಂತಹ ಪ್ರಭುಗಳಲ್ಲಿ ವಿಶ್ವಾಸವನ್ನೂ ವಿಧೇಯತ್ವವನ್ನೂ ತೋರಿಸುವುದು ಪ್ರಜೆಗಳಿಗೆ ಮುಖ್ಯ ಕರ್ತವ್ಯವಾಗಿರುವುದು. ರಾಜರ ಸುಖದುಃಖಗಳೇ ಪ್ರಜೆಗಳದಾಗಿಯೂ ಪ್ರಜೆಗಳ ತೊಂದರೆಯೇ ರಾಜರದಾಗಿಯೂ ಇರುವುವು. "ರಾಜಾ ಕಾಲಸ್ಯ ಕಾರಣಂ" "ಆಳು ಕಟ್ಟಿದವನೇ ಅರಸು" ಎಂಬ ಲೋಕೋಕ್ತಿಗಳು ಬಹು ಅನುಭವದಿಂದ ಬಂದುವುಗಳು. ಪ್ರಭುಗಳಿಗೂ ಪ್ರಜೆಗಳಿಗೂ ಇರುವ ಅನ್ಯೋನ್ಯ ಮೈತ್ರಿಯೇ ಸದ್ರಾಜ್ಯಭಾರಕ್ಕೆ ಮುಖ್ಯ ಲಕ್ಷಣವು. ರಾಜರು ಎಂತಹ ಸಾಮರ್ಥ್ಯವುಳ್ಳವರಾದರೂ ಅಸಹಾಯಕರಾಗಿ ರಾಜ್ಯ ಭಾರವನ್ನೆಲ್ಲ ತಾವೇ ವಹಿಸುವುದಕ್ಕಾಗುವುದಿಲ್ಲ. ಅವರಿಗೆ ಅಭಿಜ್ಞರಾದ ಸುಮಂತ್ರಿಗಳಿರಬೇಕು. ಅಂತಹ ಸುಮಂತ್ರಿಗಳ ಸಹಾಯದಿಂದ ಅವರು ತಮಗೆ ಬರುವ ಬಾಧೆಗಳನ್ನೂ ವಿಪತ್ತುಗಳನ್ನೂ ಪರಿಹರಿಸಿಕೊಂಡು, ದೇಶದ ಸೌಭಾಗ್ಯವನ್ನು ಹೆಚ್ಚಿಸಬಹುದು. ರಾಜ್ಯಾಂಗಕ್ಕೆ ಸೇರಿ ಅಧಿಕಾರಿಗಳಲ್ಲಿ ಮಂತ್ರಿತ್ವವೇ ಸರ್ವಶ್ರೇಷ್ಠವಾದುದು. ಅದಕ್ಕೆ ಯುಕ್ತಾಯುಕ್ತ ಪರಿಜ್ಞಾನ ಶೀಲರೂ ದಕ್ಷರೂ ಆದವರೇ ಬೇಕು. ಅವರ ಹೊರತು ರಾಜ್ಯಭಾರವನ್ನು ನಿರ್ವಹಿಸಲಾಗುವು

ದಿಲ್ಲ. ಅಂತಹ ಮಂತ್ರಿಯೋ ಮುಂತಾದವರು ಸ್ವಮತ, ಸ್ವದೇಶ, ಸ್ವಜನಗಳಲ್ಲಿ ಮಮಕಾರವುಳ್ಳವರಾಗಿಯೂ, ವಿದ್ಯಾ ವಿನಯ ಶಾಂತಿ ಗುಣಗಳುಳ್ಳವರಾಗಿಯೂ, ರಾಜಪಕ್ಷದಲ್ಲಿಯೂ ಪ್ರಜಾಪಕ್ಷದಲ್ಲಿಯೂ ದ್ರೋಹವನ್ನೆಸಗದವರಾಗಿಯೂ, ಪ್ರಜಾರಂಜಕರಾಗಿಯೂ ಇರಬೇಕು. ಈ ಅಂಶಗಳನ್ನೆಲ್ಲಾ ಮೊದಲೇ ಪರಿಷ್ಕಾರವಾಗಿ ತಿಳಿದಿದ್ದ ಶ್ರೀ ಚಾಮರಾಜೇಂದ್ರ ಒಡೆಯರವರು ಪಟ್ಟಾಭಿಷೇಕದ ದಿನ ಮಧ್ಯಾಹ್ನದ ದರ್ಬಾರಿನಲ್ಲಿ ರೆಸಿಡೆಂಟರೇ ಮೊದಲಾದ ಸಕಲಾಧಿಕಾರಿಗಳನ್ನು ಸ್ವತಃ ಬರಮಾಡಿಕೊಂಡು ಒಂದು ಪ್ರಸಿದ್ಧಿ ಪತ್ರಿಕೆಯನ್ನು ಪ್ರಕಟಿಸಿದರು.

"ಇದುವರೆಗೆ ನಮ್ಮ ತರಫಿನಲ್ಲಿ ಬ್ರಿಟಿಷ್ ಗವರ್ನಮೆಂಟಿನವರಿಂದ ನಡಿಸಲ್ಪಡುತ್ತಾ ಬಂದಿದ್ದ ಮೈಸೂರು ಸೀಮೆಯ ರಾಜ್ಯಭಾರವು ಇಂಡಿಯಾ ದೇಶದ ವೈಸ್ರಾಯಿ ಮತ್ತು ಗವರ್ನರ್ ಜನರಲ್ ಇನ್ ಕೌನ್ಸಿಲ್‌ರವರ ೧೮೮೧ನೆಯ ಇಸವಿ ಮಾರ್ಚಿ ೨೫ನೆಯ ತಾರೀಖಿನ ಪ್ರಸಿದ್ಧಿ ಪತ್ರಿಕೆಯ ಮೂಲಕವಾಗಿ ಈ ದಿವಸ ನಮ್ಮ ವಶಮಾಡಲ್ಪಟ್ಟಿರುವುದರಿಂದ ಸದರೀ ರಾಜ್ಯಭಾರವನ್ನು ಈ ದಿವಸ ನಾವು ವಹಿಸಿರುತ್ತೇವೆಂದು ಸಮಸ್ತರಿಗೂ ತಿಳಿಯಪಡಿಸುವುದು. ಶಿವಾಯಿ, ಸದರಿ ಸೀಮೆಯಲ್ಲಿರುವ ನಮ್ಮ ಸಮಸ್ತ ಪ್ರಜೆಗಳಿಗೆ ನಮಗೂ ನಮ್ಮ ವಾರಸುದಾರರುಗಳಿಗೂ ಮತ್ತು ನಮ್ಮ ಸಂಸ್ಥಾನವನ್ನು ಹೊಂದತಕ್ಕವರಿಗೂ ನೀವು ನಂಬಿಕೆಯುಳ್ಳವರಾಗಿ ನಿಜವಾದ ರಾಜಭಕ್ತಿಯುಳ್ಳವರಾಗಿಯೂ ಇರಬೇಕೆಂದು ಆಜ್ಞಾಪಿಸುತ್ತೇವೆ.

"ಸದರೀ ಸೀಮೆಯೊಳಗೆ ಇದುವರೆಗೆ ಜಾರಿಯಲ್ಲಿದ್ದ ಕಾನೂನುಗಳೂ ಮತ್ತು ಕಾನೂನುಗಳಿಗೆ ಸಮವಾದ ಬಲವುಳ್ಳ ನಿಬಂಧನೆಗಳೂ ಸದರೀ ಸೀಮೆಯೊಳಗೆ ಮುಂದೆಯೂ ಜಾರಿಯಲ್ಲಿರತಕ್ಕದೆಂದು ನಾವು ಇದರಿಂದ ಪ್ರಚುರಪಡಿಸುತ್ತೇವೆ.

"ಇದುವರೆಗೆ ಸದರೀ ಸೀಮೆಯೊಳಗೆ ಬ್ರಿಟಿಷ್ ಗವರ್ನಮೆಂಟಿನವರು ಮಾಡಿರುವ ಫೈಸಲಾತಿಗಳನ್ನೂ ಅವರು ಕೊಟ್ಟಿರುವ ಸನ್ನದುಗಳನ್ನೂ ತಕ್ಕ ಅಧಿಕಾರವುಳ್ಳ ನ್ಯಾಯಪರಿಶೀಲನೆಯ ಕೋರ್ಟುಗಳಿಂದಾಗಲಿ ಗವರ್ನರ್ ಜನರಲ್ ಇನ್ ಕೌನ್ಸಿಲ್‌ರವರ ಅನುಮತಿಯಿಂದಾಗಲಿ ಬದಲಾಯಿಸಿದ ಹೊರತು ಅಥವಾ ರದ್ದು ಮಾಡಲ್ಪಟ್ಟ ಹೊರತು ಸದರಿ ಫೈಸಲಾತಿಗಳನ್ನು ಸನ್ನದುಗಳನ್ನೂ ಅವುಗಳ ಷರತ್ತುಗಳ ಪ್ರಕಾರ ನಾವು ಅಂಗೀಕರಿಸಿ ನಡೆಸುವುದಕ್ಕೆ ಬಾಧ್ಯರಾಗಿರುತ್ತೇವೆ."

"ಸದರೀ ಸೀಮೆಯೊಳಗೆ ಈಗ ಇರತಕ್ಕ ನ್ಯಾಯಪರಿಶೀಲತೆಯ ಕೋರ್ಟುಗಳಿಗೆ ಈಗ ಅವುಗಳಿಗಿರತಕ್ಕ ಅಧಿಕಾರಗಳನ್ನು ಇದರಿಂದ ನಾವು ಕಾಯಂ ಮಾಡಿರುವುದು ಶಿವಾಯಿ ಸದರಿ ಸೀಮೆಯೊಳಗೆ ಈಗ ಕೆಲಸದಲ್ಲಿರುವ ಜಡ್ಜಿಗಳನ್ನೂ ಇತರ ಸಿವಿಲ್ ಮತ್ತು ಮಿಲಿಟರಿ ಅಧಿಕಾರಿಗಳನ್ನೂ ಅವರವರ ಉದ್ಯೋಗದಲ್ಲಿ ಕಾಯಂ ಮಾಡಿರುತ್ತೇವೆ."

"ನಮ್ಮ ಆಜ್ಞೆ ಮತ್ತು ವಿಚಾರಣೆಗೊಳಪಟ್ಟು, ಸದರೀ ಸೀಮೆಯ ಆಡಳಿತವನ್ನು ನಡೆಸುವುದಕ್ಕೋಸ್ಕರ ಒಬ್ಬ ದಿವಾನರನ್ನು ನೇಮಿಸಬೇಕೆಂದು ತೀರ್ಮಾನಿಸಿ ಚೆಟ್ಟಿಪುಣ್ಯಂ ವೀರವಲ್ಲಿ ರಂಗಾಚಾರ್ಲು, ಸಿ.ಐ.ಇ.ಯವರ ರಾಜಭಕ್ತಿ ಸಾಮರ್ಥ್ಯಗಳಲ್ಲಿಯೂ ವಿವೇಕದಲ್ಲಿಯೂ ನಂಬಿಕೆಯಿಟ್ಟು, ನಮ್ಮ ದಿವಾನರನ್ನಾಗಿ ನೇಮಕ ಮಾಡುತ್ತೇವೆ."

"ಹಾಲೀ ಜುಡಿಷಿಯಲ್ ಕಮೀಷನರಾಗಿರುವ ಬ್ಯಾರಿಷ್ಟರ್ ಅಟ್ ಲಾ ಮತ್ತು ಮಾಸ್ಟರ್ ಆಫ್ ಆರ್ಟ್ಸ್ ಆದ, ಬೆಂಗಾಲ್ ಸಿವಿಲ್ ಸರ್ವಿಸ್ಸಿಗೆ ಸೇರಿದ ಮಿಸ್ಟರ್ ಜಾನ್ ಡಗ್ಲಸ್ ಸ್ಯಾಂಡ್ ಫರ್ಡ್‌ಯವರನ್ನು ನಮ್ಮ ಕೋರಿಕೆಯ ಪ್ರಕಾರ ವೈಸ್ರಾಯಿ ಮತ್ತು ಗವರ್ನರ್ ಜನರಲ್ ಇನ್ ಕೌನ್‌ಸಿಲ್‌ರವರು ನಮ್ಮ ರಾಜ್ಯದಲ್ಲಿ ನ್ಯಾಯಪರಿಶೀಲನೆಗೆ ನಮ್ಮ ಸಹಾಯ ಕ್ಕೋಸ್ಕರ ಕೊಟ್ಟಿರುವುದರಿಂದ, ಸದರಿ ಮಿಸ್ಟರ್ ಜಾನ್ ಡಗ್ಲಸ್ ಸ್ಯಾಂಡ್ ಫರ್ಡ್‌ಯವರನ್ನು ಮೈಸೂರು ಸೀಮೆಯ ಚೀಫ್ ಜಡ್ಜ್ ಎಂದು ಕಾಯಂ ಮಾಡಿರುತ್ತೇವೆ.

"ಮತ್ತು ಮೈಸೂರು ಸೀಮೆಯ ಶ್ರೀಮನ್ಮಹಾರಾಜರವರ ಮಂತ್ರಾಲೋಚನ ಸಭೆಯೆಂದು ಒಂದು ಸಭೆಯನ್ನು ಏರ್ಪಾಡುಮಾಡಿ, ಆ ಸಭೆಗೆ ಆಯಾ ಕಾಲದಲ್ಲಿರತಕ್ಕ ದಿವಾನರವರನ್ನು ಪ್ರೆಸಿಡೆಂಟರನ್ನಾಗಿಯೂ ಇಬ್ಬರು ಅಥವಾ ಹೆಚ್ಚು ಜನಗಳನ್ನು ಮೆಂಬರುಗಳನ್ನಾಗಿಯೂ ಅಗಾಗ್ಗೆ ನೇಮಿಸಬೇಕೆಂದು ತೀರ್ಮಾನಿಸಿರುತ್ತೇವೆ. ಸದರಿ ಸಭೆಯ ಮೆಂಬರುಗಳು ಕಾನೂನು ಮಾಡುವ ವಿಷಯಗಳಲ್ಲಿಯೂ, ಕಂದಾಯ ಹಾಕುವ ವಿಷಯಗಳಲ್ಲಿಯೂ, ನಮ್ಮ ಸೀಮೆಯ ರಾಜ್ಯಭಾರಕ್ಕೂ ನಮ್ಮ ಪ್ರಜೆಗಳ ಕ್ಷೇಮಕ್ಕೂ ಸಂಬಂಧಪಟ್ಟ ಇತರ ಮುಖ್ಯವಾದ ಎಲ್ಲಾ ಏರ್ಪಾಡುಗಳ ವಿಷಯದಲ್ಲಿಯೂ ಅವರುಗಳ ಅಭಿಪ್ರಾಯವನ್ನು ನಮ್ಮ ಆಲೋಚನೆಗೆ ಶ್ರುತಪಡಿಸತಕ್ಕುದು. ಸದರಿ ಸಭೆಗೆ-ದಿವಾನ್ ಶೆಟ್ಟಿಪುಣಿಯಂ ವೀರವಲ್ಲಿ ರಂಗಾಚಾರ್ಲು, ಸಿ.ಐ.ಇ.ಯವರನ್ನು ಪ್ರೆಸಿಡೆಂಟರಾಗಿಯೂ, ಜಡ್ಜಿ ತಿರುಚನಾಪಳ್ಳಿ ರಾಯಲು ಆರೋಗ್ಯಸಾಮಿ ತಂಬುಸೆಟ್ಟಿಯವರನ್ನೂ, ಪೂರ್ಣ ಕೃಷ್ಣರಾಯರವರನ್ನೂ, ಅಟ್ಟುಪಾಕಂ ರತ್ನಸಭಾಪತಿ ಮೊದಲಿ ಯಾರರನ್ನೂ ಮೆಂಬರುಗಳನ್ನಾಗಿಯೂ ಮೊಕರರ್ ಮಾಡಿರುತ್ತೇವೆ. ಸದರಿಯವರುಗಳು ಮೂರುವರುಷ ಅಥವಾ ನಮ್ಮ ಇಷ್ಟವಿರುವವರೆಗೆ ಸದರಿ ಸಭೆಯ ಮೆಂಬರುಗಳಾಗಿರತಕ್ಕುದು.

"ಸನ್ ೧೮೮೧ನೆಯ ಇಸವಿ ಮಾರ್ಚಿ ೨೫ನೆಯ ತಾರೀಖಿನಲ್ಲೂ ಮೈಸೂರಿನಲ್ಲಿ ನಮ್ಮ ದಸ್ಕತ್ ಮೊಹರ್ ನಿಸಿ ಪ್ರಕಟಿಸಲ್ಪಟ್ಟು ಇರುತ್ತದೆ..

ಮೊಹರು

ಶ್ರೀಚಾಮರಾಜೇಂದ್ರ ಒಡೆಯರ್"

ಮೇಲ್ಕಂಡ ಪ್ರಸಿದ್ಧಿಪತ್ರಿಕೆಯು ಪ್ರಕಟಿಸಿದದಿನ ಸಾಯಂಕಾಲ ಮದ್ರಾಸು ಗವರ್ನರವರೇ ಮುಂತಾದ ಸಕಲ ಯೂರೋಪಿಯನರಿಗೂ ಜಗನ್ಮೋಹನ ಬಂಗಲೆಯಲ್ಲಿ ರಾಜೋಪಚಾರ ದಿಂದ ಕೂಡಿದ ಆತಿಥ್ಯವೂ, ಆ ಮಾರನೆಯದಿನ ಪ್ರಾತಃಕಾಲ ಸೈನ್ಯದ ರಿವ್ಯೂ ಸಮಾರಂಭವೂ ನಡೆದುವು. ಅದೇದಿನ ಮಧ್ಯಾಹ್ನ ನಗರವಾಸಿಗಳೂ ಸಂಸ್ಥಾನದ ಸಕಲ ಡಿಸ್ಟ್ರಿಕ್ಟ್ ನಿವಾಸಿಗಳ ಪ್ರತಿನಿಧಿಗಳೂ ಶ್ರೀಮನ್ಮಹಾರಾಜವರಿಗೆ ಅಭಿನಂದನಪತ್ರಿಕೆಗಳನ್ನು ಒಪ್ಪಿಸಿದರು. ಅವರಿಗೆಲ್ಲ ಶ್ರೀಮನ್ಮಹಾರಾಜರವರು ಸದುತ್ತರಗಳನ್ನು ದಯೆಪಾಲಿಸಿದುದಲ್ಲದೆ, ಉತ್ಸವಕ್ಕಾಗಿ ಬಂದಿದ್ದ ದೊಡ್ಡಮನುಷ್ಯರಿಗೆ ಕಿಲ್ಲತ್ತುಗಳನ್ನು ಕೊಟ್ಟು ಮಾರ್ಯಾದೆಮಾಡಿ ಅವರವರ ಊರುಗಳಿಗೆ ಕಳುಹಿಸಿಕೊಟ್ಟರು.

# ವೀರಶೈವ ಚಳುವಳಿಯ ಹುಟ್ಟು

ಮೂಲ: ಆರ್.ಎಸ್. ನಂದಿ

ಅನುವಾದ: ವಿಜಯಕುಮಾರ ಎಂ. ಬೋರಟ್ಟಿ

(ಆರ್.ಎಸ್. ನಂದಿ ಅವರು ಪಾಟ್ನಾ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದವರು. ಕರ್ನಾಟಕದ ಮೇಲೆ. ಅದರಲ್ಲೂ ವಚನಕಾರರ ಮೇಲೆ ಅನೇಕ ಅಮೂಲ್ಯವಾದ ಬರವಣಿಗೆಗಳನ್ನು ಮಾಡಿದವರು. ನಂದಿಯವರು ಶಿ.ಚ. ನಂದೀಮಠ ಅವರ 'ಎ ಹ್ಯಾಂಡ್ ಬುಕ್ ಆಫ್ ವೀರಶೈವಿಸಂ'ಗೆ ಅವರು ಬರೆದ ಪ್ರಸ್ತಾವನೆ ಕೂಡ ಮುಖ್ಯವಾದುದು. ನಂದಿಯವರು 'ಇಂಡಿಯನ್ ಹಿಸ್ಟಾರಿಕಲ್ ರಿವ್ಯೂ' (ಸಂ೨:ಸಂಚಿಕೆ ೨.ಪು. ೩೨-೪೬)ನಲ್ಲಿ ಪ್ರಕಟಿಸಿದ 'ಒರಿಜಿನ್ ಆಫ್ ವೀರಶೈವ ಮೂವಮೆಂಟ್' ಎಂಬ ಲೇಖನದ ಅನುವಾದವನ್ನು ಇಲ್ಲಿ ಕೊಡಲಾಗಿದೆ. ಈ ಲೇಖನವನ್ನು ಒದಗಿಸಿಕೊಟ್ಟ ಡಾ. ಆರ್.ಎಸ್. ಗುಂಜಾಳ ಅವರನ್ನು 'ಕನ್ನಡ ಅಧ್ಯಯನ' ಕೃತಜ್ಞತೆಯಿಂದ ನೆನೆಯುತ್ತದೆ-ಸಂ)

ವೀರಶೈವ ಎಂಬುದು ಕರ್ನಾಟಕದ ವಾಯುವ್ಯ ಪ್ರದೇಶದಲ್ಲಿ ಹನ್ನೆರಡನೆಯ ಶತಮಾನದ ಅಂತ್ಯದಲ್ಲಿ ಹುಟ್ಟಿದ ಒಂದು ಶಕ್ತಿಯುತವಾದ ಶೈವ ಚಳವಳಿ. ನಂತರದ ಶತಮಾನಗಳಲ್ಲಿ ವೀರಶೈವ ಚಳುವಳಿಯು ವಿಶಾಲ ಕರ್ನಾಟಕದ ಹಾಗೂ ಆಂಧ್ರಪ್ರದೇಶದ ಇತರ ಭಾಗಗಳಿಗೂ ಹರಡಿತು. ವೀರಶೈವಕ್ಕೆ ಲಿಂಗಾಯತ ಎಂಬ ಹೆಸರೂ ಸಹ ಪ್ರಚಲಿತದಲ್ಲಿದೆ. ಸಂಪ್ರದಾಯಸ್ಥ ಬ್ರಾಹ್ಮಣವಾದಿ ಸಿದ್ಧಾಂತಕ್ಕೆ ವಿರುದ್ಧವಾಗಿ ಬೆಳೆದ ಈ ಚಳುವಳಿ ಮೂರ್ತಿಪೂಜೆಯನ್ನು ಹಾಗೂ ಜಾತಿ ಆಧಾರಿತ ಸಮಾಜವನ್ನು ಖಂಡಿಸಿತು. ವೀರಶೈವ ಚಳುವಳಿಯು ಹುಟ್ಟಿನಿಂದ ಜಾತಿಯ ವ್ಯತ್ಯಾಸಗಳನ್ನು ತಿರಸ್ಕರಿಸುತ್ತಾ ಭ್ರಾತೃತ್ವವನ್ನು ಎತ್ತಿ ಹಿಡಿಯಿತು. ಆದರೆ, ವೀರಶೈವ ಧರ್ಮವು ಯಾವ ಬ್ರಾಹ್ಮಣ ಜಾತಿ ವ್ಯವಸ್ಥೆಯನ್ನು ತಿರಸ್ಕರಿಸುತ್ತೋ, ಅದೇ ತರಹ ಹುಟ್ಟು, ಹಾಗೂ ಶುದ್ಧಿಯ ಆಧಾರದ ಮೇಲೆ ಸಾಮಾಜಿಕ ಪ್ರತ್ಯೇಕತೆಯನ್ನು ಬೆಳಸಿಕೊಂಡಿತು.

ವೀರಶೈವ ಚಳುವಳಿಯ ಪ್ರಮುಖ ಬೆಂಬಲಿಗರು ಪುರೋಹಿತ, ವರ್ತಕ, ರೈತ ಹಾಗೂ ಕಸುಬುದಾರರ ಸಮುದಾಯಗಳಿಂದ ಬಂದವರು. ಒಟ್ಟಾಗಿ 'ಜಂಗಮ'ರೆಂದು ಕರೆಯಲ್ಪಡುವ ಪುರೋಹಿತರು ಕಸುಬಿನಿಂದ ಶಿಕ್ಷಕರು ಹಾಗೂ ಆತ್ಮೋದ್ಧಾರಕದ ಪ್ರತಿಪಾದಕರು. ಇವರಿಗೆ ಇತರರು ಧರ್ಮ ಕಾಣಿಕೆಗಳನ್ನು ನೀಡುವ ಸಂಪ್ರದಾಯವೂ ಇದೆ. ಆದರೆ ಜಂಗಮರಲ್ಲಿ

ಉತ್ಪಾದನೆಯ ಮೂಲಕ್ಕಾಗಿ ವ್ಯಾಪಾರವನ್ನು ಹಾಗೂ ಅಂಗಡಿಮುಂಗಟ್ಟುಗಳನ್ನು ನಡೆಸುವವರೂ ಇದ್ದಾರೆ.[೨] ಈ ಮತಕ್ಕೆ ಸೇರಿದ ಪುರೋಹಿತರು ಮೂಲತಃ ಹಳೆಯ ಬ್ರಾಹ್ಮಣ ಪುರೋಹಿತ ಶಾಹಿಗೆ ಸೇರಿದವರಾಗಿದ್ದು, ದೇವಸ್ಥಾನಗಳಲ್ಲಿನ ಪರಂಪರಾಗತ ಪುರೋಹಿತಶಾಹಿ ಅಧಿಕಾರದ[೩] ವೃದ್ಧಿಯ ವಿರುದ್ಧ ತಮ್ಮನ್ನು ತಾವು ರಕ್ಷಿಸಿಕೊಳ್ಳುವವರ ಜೊತೆಗೆ, ತಮ್ಮ ಶ್ರೇಯಸ್ಸನ್ನು ಬಲವಾಗಿಸುವುದಕೋಸ್ಕರ ಬೇರೆಯಾದವರು. ಜಂಗಮರ ಹಾಗೆ ವೀರಶೈವರಲ್ಲಿ 'ಪಂಚಮ ಸಾಲಿ'ಗಳೆಂದು ಕರೆಯಲ್ಪಡುವ ವರ್ತಕ ಸಮುದಾಯದವರು ಇರುವರು. ವೀರಶೈವರಲ್ಲಿ ಈ 'ಪಂಚಮಶಾಲಿ'ಗಳು ಪ್ರಭಾವಶಾಲಿ ಸಮುದಾಯದವರು. ಜಂಗಮರ ಜೊತೆಗೆ ಮದುವೆಯ ಸಂಬಂಧವಾಗಲಿ ಅಥವಾ ಊಟ ಮಾಡುವುದಾಗಲಿ ನಿಷೇಧಕ್ಕೊಳಪಟ್ಟವರು.[೪] ಜಾತಿಯ ಶ್ರೇಣಿಯಲ್ಲಿ ಪಂಚಮಸಾಲಿಗಳ ನಂತರ ನೇಕಾರರು, ರೈತರು, ಕಸುಬುದಾರರು, ಸಿಂಪಿಗರು ಹಾಗೂ ಗಾಣಿಗರು ಇರುವರು. ಪ್ರಮುಖ ಲಿಂಗಾಯತ ಸಮುದಾಯದಲ್ಲಿ ಬಹುಸಂಖ್ಯಾತರಾಗಿರುವ ಇವರು 'ಪಂಚಮ ಸಾಲಿಯೇತರರು' ಎಂದು ಕರೆಯಲ್ಪಡುವವರು. ಈ ಜಾತಿಯ ಲಿಂಗಾಯತರು 'ಅಷ್ಟಾವರ್ಣ'ಗಳನ್ನು ಆಚರಿಸಿದರೂ, ಪಂಚಮರ ಜೊತೆಗೆ ಮದುವೆ ಅಥವಾ ಇತರ ಸಂಬಂಧಗಳನ್ನು ಬೆಳಸುವ ಹಾಗಿಲ್ಲ. ಲಿಂಗಾಯತರಲ್ಲಿ ನಂತರದ ಕೆಳಮಟ್ಟದಲ್ಲಿರುವವರು ಚಮ್ಮಾರರು, ಅಗಸರು, ಮೀನುಗಾರರು ಹಾಗೂ ಕೆಲವು ಅಸ್ಪೃಶ್ಯರು. ಇವರು ಪವಿತ್ರ ಲಿಂಗದಲ್ಲಿ ತಮ್ಮನ್ನು ತಾವು ತೊಡಗಿಸುವುಕೊಳ್ಳುವುದಿರಲಿ, ಅಷ್ಟಾವರಣಗಳನ್ನು ಆಚರಿಸುವುದೂ ಸಾಧ್ಯವಿಲ್ಲ.[೫]

ವಾಣಿಜ್ಯೋದ್ಯಮದಲ್ಲಿ ಸಾಕಷ್ಟು ಅಭಿವೃದ್ಧಿ ಗಳಿಸಿರುವ ಜಿಲ್ಲೆಗಳಾದ ಧಾರವಾಡ, ಬಿಜಾಪುರ ಹಾಗೂ ಬೆಳಗಾಂನಲ್ಲಿ ಲಿಂಗಾಯತರು ಹೆಚ್ಚಾಗಿದ್ದಾರೆ. ಇವರು ಧಾರವಾಡದ ಒಟ್ಟು ಜನಸಂಖ್ಯೆಯ ಶೇ.೫೦ ಭಾಗದಷ್ಟಿದ್ದರೆ, ಇತರ ಜಿಲ್ಲೆಗಳಲ್ಲಿ ಶೇ.೪೦ನಷ್ಟಿರುವರು. ಧಾರವಾಡದಲ್ಲಿ ಲಿಂಗಾಯತ ವರ್ತಕರು ಶೇ.೧೨ರಷ್ಟಿದ್ದರೆ, ವ್ಯವಸಾಯಗಾರರು ಹಾಗೂ ಕಸುಬುದಾರರು, ಶೇ.೫೫ರಷ್ಟಿದ್ದಾರೆ. ಬೆಳಗಾಂ ತಾಲ್ಲೂಕಿನಲ್ಲಿ ಲಿಂಗಾಯತ ವ್ಯಾಪಾರಗಾರರು ಶೇ.೧೨ರಷ್ಟಿದ್ದರೆ, ವ್ಯವಸಾಯದಲ್ಲಿ ತೊಡಗಿರುವವರು ಹಾಗೂ ಇತರ ಉತ್ಪಾದಕರು ಶೇ.೫೯ರಷ್ಟಿರುವರು. ಬಿಜಾಪುರದಲ್ಲಿ ಈ ಸಂಖ್ಯೆ ಕ್ರಮೇಣ, ಶೇ.೧೨ ಹಾಗೂ ಶೇ.೪೩ ರಷ್ಟಿದೆ. ಸ್ಪಷ್ಟವಾಗಿ ಹೇಳುವುದಾದರೆ ವೀರಶೈವವು ಅನೇಕ ಉತ್ಪಾದನ ಹಾಗೂ ಹಂಚಿಕೆಯ ಪ್ರಕ್ರಿಯೆಗಳನ್ನೊಳಗೊಂಡ ವಿವಿಧ ಸಾಮಾಜಿಕ ವಿಭಾಗಗಳ ಒಗ್ಗೂಡುವಿಕೆಯಿಂದ ಹುಟ್ಟಿದ ಮತ ಚಳುವಳಿ. ಈ ಒಕ್ಕೂಟವು ಊಳಿಗಮಾನ್ಯ ಮಧ್ಯವರ್ತಿಗಳ ಶೋಷಣೆಗಳಿಂದ ತಮ್ಮ ತಮ್ಮ ಆಸಕ್ತಿಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿ ವರ್ತಕ ಹಾಗೂ ಇತರ ಉತ್ಪಾದಕ ವರ್ಗಗಳನ್ನು ಒಟ್ಟಾಗಿಸಿದಂತೆ ಕಾಣುತ್ತದೆ. ಚರಿತ್ರೆಯಲ್ಲಿ ಕಾಣಿಸುವಂತೆ ಈ ಊಳಿಗಮಾನ್ಯ ಮಧ್ಯವರ್ತಿಗಳು ಪ್ರಾಥಮಿಕ ಉತ್ಪಾದಕರನ್ನು ಯಾವುದೇ ಉದ್ಯಮ ಅಥವಾ ವ್ಯಾಪಾರದಲ್ಲಿ ತೊಡಗಿಕೊಳ್ಳದಂತೆ ಶೋಷಣೆಗೊಳಪಡಿಸಿದ್ದರು. ಯಾವ ವ್ಯವಸಾಯ ಹಾಗೂ ಕೈಗಾರಿಕಾ ಕಾರ್ಮಿಕರನ್ನು ಹಳೆಯ ಬ್ರಾಹ್ಮಣ ವ್ಯವಸ್ಥೆಯು ತುಚ್ಛ ಶೂದ್ರರನ್ನಾಗಿ[೬] 'ಕಂಡಿತ್ತೊ, ಅಂತಹವರಿಗೆ ವೀರಶೈವ ಚಳುವಳಿಯ

ಉಗಮವು ತಮ್ಮ ಕೆಳವರ್ಗದ ಸ್ವಾಭಿಮಾನದ ಬಯಕೆಯ. ಉದ್ಧಾರದ ದಾರಿಯಾಗಿ ಕಂಡಿತು.

ವೀರಶೈವ ಇತಿಹಾಸಕಾರರು ಚಳುವಳಿಯ ಉಗಮದ ಬಗ್ಗೆ ಹೇಳಬೇಕಾದಾಗ ಅದರ ತಾತ್ವಿಕ ಜ್ಞಾನಕ್ಕೆ ಮಹತ್ವ ಕೊಡುತ್ತಾರೆ ಹಾಗೂ ಆಗಿನ ಮತಗಳ ನಡುವೆ ಇದ್ದ ಘರ್ಷಣೆಯ ಸ್ವರೂಪದ ಕಡೆಗೆ ಗಮನ ಹರಿಸುತ್ತಾರೆ. ಆದರೆ ಚಳುವಳಿಯ ಹುಟ್ಟಿಗೆ ಕಾರಣವಾದ ಭೌತಿಕ ಕಾರಣಗಳನ್ನು ನಿರ್ಲಕ್ಷಿಸುತ್ತಾರೆ. ಉದಾಹರಣೆಗೆ, ಈ ಮತದ ಹುಟ್ಟಿಗೆ ಕಾಶ್ಮೀರದಿಂದ ಹಾಗೂ ಬಂಗಾಲದಿಂದ ದಕ್ಷಿಣದ ಕಡೆಗೆ ಹೊರಟು ಬಂದ ಶೈವ ಸಂಪ್ರದಾಯವು ಕಾರಣವೆನ್ನುತ್ತಾರೆ. ವೀರಶೈವ ಮತದ ತಾತ್ವಿಕ ಜ್ಞಾನಧಾರೆಯಲ್ಲಿ ಉತ್ತರದ ಶೈವ ಸಂಪ್ರದಾಯದ ಛಾಯೆಯಿದ್ದರೂ ವ್ಯಾಪಾರ ಮತ್ತು ಉತ್ಪಾದಕ ವರ್ಗಗಳ ಹಿತಾಸಕ್ತಿಗಳ ಫಲವಾಗಿ ವೀರಶೈವ ಚಳುವಳಿಯು ಹೇಗೆ ಹುಟ್ಟಿಕೊಂಡಿತು ಎಂಬುದರ ಬಗ್ಗೆ ಗಮನಹರಿಸುವುದಿಲ್ಲ. ಇದೇ ತರಹ, ವೀರಶೈವ ಚಳುವಳಿಯು ಜೈನ ಮತದ ವಿರುದ್ಧ ಹುಟ್ಟಿದ್ದು ಎಂದು ಹೇಳುವುದರಿಂದ, ಮತ-ಮತಗಳ ನಡುವೆ ಘರ್ಷಣೆಗೆ ಕಾರಣವಾದ ಸಾಮಾಜಿಕ ಪರಿಸ್ಥಿತಿಗಳನ್ನು ಮರೆಮಾಚಿದಂತಾಗುತ್ತದೆ. ಶ್ರೀಮಂತ ವರ್ತಕರಿಂದ ಹಾಗೂ ಉತ್ಪಾದಕರಿಂದ ಬೆಂಬಲಿತವಾದ ಜೈನ ಹಾಗೂ ವೀರಶೈವ ಧರ್ಮಗಳು ಧಾರ್ಮಿಕ ಹಗೆತನದಿಂದ ಘರ್ಷಣೆಗೊಳಪಟ್ಟಿದ್ದವು ಎಂದು ಹೇಳುವುದು ಬಹಳ ಸರಳವೆನಿಸುತ್ತದೆ. ವಾಯುವ್ಯ ಕರ್ನಾಟಕದಲ್ಲಿ ಬ್ರಾಹ್ಮಣ ವರ್ತಕರಿಗೆ ಸ್ಪರ್ಧೆಯನ್ನು ಒಡ್ಡಿದವರಲ್ಲಿ ಇತರ ಬ್ರಾಹ್ಮಣರಲ್ಲದೆ, ಅರಬ್ಬರು ಹಾಗೂ ಜೈನರೂ ಸೇರಿದ್ದರು. ವೀರಶೈವರಲ್ಲಿ ಬಹಳಷ್ಟು ಪ್ರಭಾವಶಾಲಿಯಾದ 'ವೀರಬಣಂಜು' ಈಗಿನ ಬಣಜಿಗ ಹಾಗೂ ಲಿಂಗ ಬಣಜಿಗ ವರ್ತಕರಲ್ಲಿ ಬಹಳಷ್ಟು ಜನ ಜೈನರಿದ್ದರು. ಬೆಳಗಾಂ ಜಿಲ್ಲೆಯ ಶಾಸನಗಳಲ್ಲಿ ಹೊಗಳಲ್ಪಟ್ಟಿರುವ 'ಮುಮ್ಮುರಿದಂಡಾಸ್.'ರಲ್ಲಿಯೂ ಸಹ ನಾವು ಜೈನ ವರ್ತಕರನ್ನು ನೋಡಬಹುದು. ಮಧ್ಯಕಾಲೀನ ಕರ್ನಾಟಕದ ಅತಿ ಪ್ರಭಾವಶಾಲಿ ವ್ಯಾಪಾರ ವರ್ಗದಲ್ಲಿದ್ದ ಐಹೊಳೆಯ ಐನೂರು ಜನ 'ಸ್ವಾಮಿ'ಗಳಲ್ಲಿ ಜೈನ ವರ್ತಕರೂ ಕಾಣಸಿಗುತ್ತಾರೆ. ಕ್ರಿ.ಶ. ೧೦೫೦ರ ಶಿಕಾರಿಪುರ ಶಾಸನವು ಇದನ್ನು ದೃಢಪಡಿಸುತ್ತದೆ. ದೂರದ ವ್ಯಾಪಾರದಲ್ಲಿ ತೊಡಗಿದ್ದ 'ನಾನಾದೇಶಿ' ಹಾಗೂ 'ಉಭಯದೇಶಿ' ವರ್ಗಗಳಲ್ಲಿಯೂ ಸಹ ಜೈನ ಮತ್ತು ಬೌದ್ಧ ಧರ್ಮದವರು ಕಾಣಸಿಗುತ್ತಾರೆ. ಈ ಸ್ಥಳದಲ್ಲಿ ವ್ಯಾಪಾರದ ಪುನರುಜ್ಜೀವನವು ವಾಣಿಜ್ಯ ಸ್ಪರ್ಧೆಯನ್ನು ಹೆಚ್ಚಿಸಿ, ಬ್ರಾಹ್ಮಣ ಹಾಗೂ ಜೈನ ವ್ಯಾಪಾರಿಗಳ ನಡುವೆ ವೈಷಮ್ಯವನ್ನು ಹುಟ್ಟು ಹಾಕಿರುವ ಸಾಧ್ಯತೆಗಳಿವೆ. ಇವರಿಬ್ಬರ ನಡುವಿನ ಘರ್ಷಣೆಯು ವೀರಶೈವ ಧರ್ಮದ ಹುಟ್ಟಿಗೆ ಕಾರಣವಾಗಿರಬಹುದು.

೧೦-೧೧ನೇ ಶತಮಾನಗಳಲ್ಲಿ ವಾಯುವ್ಯ ಕರ್ನಾಟಕದಲ್ಲಿ ನಡೆದ ನಿರಂತರ ವಾಣಿಜ್ಯೀಕರಣವು ಅನೇಕ ವ್ಯಾಪಾರಸ್ಥ ಮತ್ತು ಉತ್ಪಾದಕ ವರ್ಗಗಳು ಪ್ರಾಮುಖ್ಯತೆಯನ್ನು ಪಡೆಯಲು ಅನುಕೂಲವಾದ 'ಸಾಮಾಜಿಕ ಸ್ಥಿತಿ'ಯನ್ನು ನಿರ್ಮಿಸುವುದಲ್ಲದೆ, ಈ ವರ್ಗಗಳು ಭೂಮಾಲೀಕರ ಶೋಷಣೆಯಿಂದ ನಿರ್ಮಿತವಾದ ಹಳೆಯ ವ್ಯವಸ್ಥೆಗೆ ಮುಖಾಮುಖಿಯಾಗಿ ನಿಲ್ಲುವಂತೆ ಮಾಡಿದವು.

ಕ್ರಿಸ್ತಶಕದ ಮೊದಲ ಮತ್ತು ನಂತರದ ಶತಮಾನಗಳಲ್ಲಿ ಭಾರತ ಹಾಗೂ ಪಶ್ಚಿಮದ ನಡುವಿನ ಕಡಲ-ವ್ಯಾಪಾರವನ್ನು ಅರಬ್ಬರು ಹಿಡಿತದಲ್ಲಿಟ್ಟುಕೊಂಡಿದ್ದರು. ಕೆಲವೇ ಉತ್ಪಾದಕರ ಮತ್ತು ಹಂಚಿಕೆದಾರರ ಒಡೆತನದಲ್ಲಿದ್ದ ವ್ಯಾಪಾರ, ಭೋಗವಸ್ತುಗಳಾದ ರೇಷ್ಮೆ ಮತ್ತು ಸಂಬಾರ ಪದಾರ್ಥಗಳನ್ನು ಉತ್ಪಾದಿಸುವುದಕ್ಕೆ ಮಾತ್ರ ಸೀಮಿತವಾಗಿತ್ತು. ಈ ಕಾಲದಲ್ಲಿ ಉತ್ಪಾದಿಸಲ್ಪಟ್ಟ ವಸ್ತುಗಳು ಅಮುಖ್ಯವೆನಿಸಿದ್ದವು ಮತ್ತು ಸ್ಥಳೀಯ ಬಳಕೆಗೆ ಸೀಮಿತವಾಗಿದ್ದವು. ಆದರೆ ೧೧ನೇ ಶತಮಾನದ ನಂತರ ಹೆಚ್ಚಿನ ಪ್ರಮಾಣದಲ್ಲುಂಟಾದ ವಸ್ತುಗಳ ಉತ್ಪಾದನೆ, ರಫ್ತನ್ನು ಹೆಚ್ಚಿಸಿದುದಲ್ಲದೆ ಆಂತರಿಕ ಮಾರುಕಟ್ಟೆಯ ಬೆಳವಣಿಗೆಯನ್ನು ಪ್ರೋತ್ಸಾಹಿಸಿತು. ವಿವಿಧ ಹಂತಗಳಲ್ಲಿ ಎಲ್ಲಾ ತರಹದ ಉತ್ಪಾದಕರ ಮತ್ತು ಮಾಲೀಕರ ಭಾಗವಹಿಸುವಿಕೆಯಿಂದ ಉತ್ಪಾದನೆಯಲ್ಲಿ ಈ ಬದಲಾವಣೆ ಉಂಟಾಯಿತು.

ಈ ತರಹದ ಭೋಗವಸ್ತುಗಳಿಗೆ, ವಿಶೇಷವಾಗಿ ಮಸಾಲ ವಸ್ತುಗಳಿಗೆ, ಬೇಡಿಕೆಯು ಮತ್ತು ಮಾರುಕಟ್ಟೆಯು ರೋಮನ್ ಸಾಮ್ರಾಜ್ಯದ ದಿನಗಳಿಂದಲೂ ಬೆಳೆಯುತ್ತಲೇ ಇತ್ತು. ಯೂರೋಪ್, ಪಶ್ಚಿಮ ಏಷ್ಯಾ ಹಾಗೂ ಚೈನಾಗಳಲ್ಲಿನ ಮಸಾಲ ವಸ್ತುಗಳ ಬೇಡಿಕೆ ಸಮಾಜದ ಮೇಲ್ತರಗತಿಗಳಿಗೆ ಸೀಮಿತವಾಗಿರದೆ, ಎಲ್ಲಾ ಸ್ತರದ ಜನರ ಸಾಮಾನ್ಯ ಬೇಡಿಕೆಯಾಗಿತ್ತು. ಭಾರತದಲ್ಲಿನ ಪಶ್ಚಿಮ ಕರಾವಳಿಯ ಏಕಸ್ವಾಮ್ಯದಲ್ಲಿದ್ದ ಕರಿ ಮೆಣಸಿನ ಮಾರುಕಟ್ಟೆಯು, ಬಹಳ ಬೇಗ ಬೆಳೆಯುತ್ತಿತ್ತು. ಇದರ ಬೇಡಿಕೆಯಲ್ಲಿ ಚೀನಾದ ಪಾತ್ರ ಹಿರಿದು. ಕಿಂಸೆ ಎಂಬ ಪಟ್ಟಣದಲ್ಲಿಯೇ ದಿನಕ್ಕೆ ೧೦,೦೦೦ ಪೌಂಡ್‌ನಷ್ಟು ಮೆಣಸನ್ನು ಅಲ್ಲಿನ ವಾಸಿಗಳು ಉಪಯೋಗಿಸುತ್ತಿದ್ದರು. ಈ ಪಟ್ಟಣಕ್ಕೆ ಮೆಣಸು ಭಾರತದಿಂದ ರಫ್ತಾಗುತ್ತಿತ್ತು.[೧೨] ಪರ್ಷಿಯನ್ ಗಲ್ಫ್ ಹಾಗೂ ಅಲೆಗ್ಸಾಂಡ್ರಿಯಾಗಳಿಗೆ ಹಡಗುಗಟ್ಟಲೆ ಕಳುಹಿಸಲ್ಪಡುತ್ತಿದ್ದ ಮೆಣಸು, ಚೀನಾಕ್ಕೆ ಕಳುಹಿಸಲ್ಪಡುತ್ತಿದ್ದ ಮೆಣಸಿನ ಹತ್ತನೇ ಒಂದಂಶದಷ್ಟೂ ಇರುತ್ತಿರಲಿಲ್ಲ.[೧೩] ಭಾರತದಲ್ಲಿ ಬೆಳೆದ ಶುಂಠಿಗೆ ಮೊದ ಮೊದಲು ಹೊರಗಡೆ ಮಾರುಕಟ್ಟೆ ಇರದಿದ್ದರೂ, ಮಧ್ಯಯುಗೀನ ಯೂರೋಪಿನಲ್ಲಿ ಅದಕ್ಕೆ ಹೆಚ್ಚು ಬೆಲೆ ಬಂದಿತು.[೧೪] ಶುಂಠಿಯ ರಫ್ತಿನ ಬಗೆಗೆ ಮಾಹಿತಿಗಳನ್ನು ಮಾರ್ಕ್‌ಪೋಲೋ, ನಿಕಾಲೋ ಕಾಂಟಿ ಮತ್ತು ವಾಸ್ಕೋಡಿಗಾಮರ ಬರಹಗಳಿಂದ ತಿಳಿಯಬಹುದು.[೧೫]

ಮುಂಚಿನ ರಫ್ತಿನ ಪಟ್ಟಿಯಲ್ಲಿಯೇ ಇರದಿದ್ದ ಬೇಳೆ ಪದಾರ್ಥಗಳು, ಈಗ ಹೆಚ್ಚು ಹೆಚ್ಚು ರಫ್ತಾಗತೊಡಗಿದವು. ೧೨ನೇ ಶತಮಾನದ ಉತ್ತರಾರ್ಧದಲ್ಲಿ ಜೀವಿಸಿದ್ದ ಸ್ಪೇನ್ ದೇಶದ ಜೆಸ್ಯೂಟ್ ಪಾದ್ರಿಯಾದ ಟ್ಯುಡೋಲ್‌ನ ಬೆಂಜಮೀನನು ಗೋಧಿ, ಬಾರ್ಲಿ, ಸಾಸಿವೆ, ಬೇಳೆ, ಅಗಸೆ ಬೀಜ ಮತ್ತು ಸಾಮಾನ್ಯ ಬಟ್ಟೆಗಳನ್ನು ಪರ್ಷಿಯನ್ ವ್ಯಾಪಾರಗಾರರು ತಮ್ಮ ದೇಶಕ್ಕೆ ಹಿಂತಿರುಗುವಾಗ ಕಿಶ್ ದ್ವೀಪಕ್ಕೆ ತರುತ್ತಿದ್ದುದನ್ನು ಗಮನಿಸಿದ್ದಾನೆ.[೧೬] ಬೆಂಜಮಿನ್ನನ ಸಮಕಾಲೀನನಾದ ಆಲ್ ಆದ್ರಿಸ್ ಎಂಬುವವನು ಮಲಬಾರ್ ಸಮುದ್ರ ತೀರದಿಂದ ಶ್ರೀಲಂಕಾಗೆ ಹೆಚ್ಚಿನ ಪ್ರಮಾಣದಲ್ಲಿ ಅಕ್ಕಿ ರಫ್ತಾಗುತ್ತಿದ್ದುದನ್ನು ವಿವರಿಸಿದ್ದಾನೆ.[೧೭] ಹದಿನಾರನೇ ಶತಮಾನದ ಮೊದಲರ್ಧದಲ್ಲಿ ಭಾರತದಲ್ಲಿದ್ದ ವರ್ಥಿಮಾ ಹಾಗೂ ಬಾರ್ಬೋಸರ ಪ್ರಕಾರ,

ಮಲಬಾರ್ ಪ್ರದೇಶವು ಅಕ್ಕಿಯನ್ನು ಮಂಗಳೂರಿನಿಂದ ತರಿಸಿಕೊಳ್ಳುತ್ತಿತ್ತು. ಬಾರ್ಬೋಸ್ ಹೇಳುವ ಪ್ರಕಾರ ಭಟ್ಕಳ, ಬಾಬುಲ್ ಬಾಲ್ ಹಾಗೂ ಮಂಗಳೂರಿನಿಂದ ಆಡೆನ್ ಹಾಗೂ ಓರ್ ಮೂಜ್ ಬಂದರುಗಳಿಗೆ ರಫ್ತಾಗುತ್ತಿದ್ದ ಅಕ್ಕಿಯ ಪ್ರಮಾಣ ಕಾಲಕ್ರಮೇಣ ಹೆಚ್ಚಾಯಿತು. ಈ ಕಾಲದಲ್ಲಿ ಹೆಚ್ಚಿನ ಉತ್ಪಾದನೆಗೊಳಗಾಗಿ ಬಳಕೆಯಾಗಲ್ಪಡುತ್ತಿದ್ದ ಇತರ ಪದಾರ್ಥಗಳಲ್ಲಿ ಪ್ರಮುಖವಾದವು ಕಬ್ಬು, ಬೆಲ್ಲ ಮತ್ತು ತೆಂಗಿನ ಉಪ-ಉತ್ಪನ್ನಗಳಾದ ತೆಂಗಿನ ನಾರು, ಬಣ್ಣ ಹಾಕುವ ಪದಾರ್ಥಗಳು ಸೇರಿದ್ದವು. ಕಲ್ಲು ಸಕ್ಕರೆ ಹಾಗೂ ತೆಂಗಿನ ನಾರಿನ ರಫ್ತನ್ನು ೧೩೩೦ರಲ್ಲಿ ಫ್ರಿಯರ್ ಜೋರ್ಡಾನಸ್‌ನು ಗಮನಿಸಿದ್ದಾನೆ. ಹದಿಮೂರನೇ ಶತಮಾನದಲ್ಲಿ ದಕ್ಷಿಣ ಭಾರತದ ಕೆಲವು ಪ್ರದೇಶಗಳಿಗೆ ಪ್ರವಾಸ ಕೈಗೊಂಡಿದ್ದ ಮಾರ್ಕೊ ಪೋಲೋನು ಕುಲಾಂ ಅಥವಾ ಕ್ವಿಲಾನ್ ಪ್ರದೇಶದಿಂದ ಹೊರ ದೇಶಗಳಿಗೆ ರಫ್ತಾಗುತ್ತಿದ್ದ ನೀಲಿ ಪದಾರ್ಥದ ಬಗ್ಗೆ ತಿಳಿಸಿದ್ದಾನೆ. ಹತ್ತಿಯ ಪದಾರ್ಥ, ರತ್ನಗಂಬಳಿ, ದಿಂಜಿನ ಮೆತ್ತೆ ಹಾಗೂ ಚರ್ಮದ ಪದಾರ್ಥಗಳಿಗೆ ಹೊರ ದೇಶಗಳಲ್ಲಿ ನಿರಂತರ ಬೇಡಿಕೆ ಇದ್ದುದು ಸ್ಥಳೀಯ ಉತ್ಪಾದನೆಗೆ ಉತ್ತೇಜನ ನೀಡಿತು. ಈ ಪದಾರ್ಥಗಳ ಮುಖ್ಯ ಬಳಕೆದಾರರು ಮೆಕ್ಕಾ, ಓರ್ ಮೂಜ್ ಹಾಗೂ ಪರ್ಷಿಯಾದ ಇತರೆ ಸ್ಥಳಗಳಲ್ಲಿದ್ದ ಶ್ರೀಮಂತರು. ಎಣ್ಣೆಯ ಹಾಗೂ ಎಣ್ಣೆ ಬೀಜದ ರಫ್ತಿನ ಬಗ್ಗೆ ಪುರಾವೆಗಳಿಲ್ಲದಿದ್ದರೂ, ಶಾಸನಗಳಲ್ಲಿ ಎಣ್ಣೆ ಕಾರ್ಖಾನೆಗಳಿಂದ ಸಿಗುತ್ತಿದ್ದ ವರಮಾನದ ಬಗ್ಗೆ ಉಲ್ಲೇಖವಿರುವುದರಿಂದ, ಈ ಎರಡು ಪದಾರ್ಥಗಳನ್ನು ವಾಣಿಜ್ಯೋದ್ದೇಶಕ್ಕಾಗಿ ಉತ್ಪಾದಿಸುತ್ತಿದ್ದುದು ಕಂಡುಬರುತ್ತದೆ.

ಈ ಮೇಲೆ ತಿಳಿಸಿದ ಪದಾರ್ಥಗಳ ಹೆಚ್ಚಿನ ಉತ್ಪಾದನೆಗೆ ಕಾರಣವಾದ ಅಂಶಗಳನ್ನು ಸ್ಪಷ್ಟವಾಗಿ ತಿಳಿಯುವುದು ಸ್ವಲ್ಪ ಕಷ್ಟ. ಆದರೂ ಮುಸ್ಲಿಂದೇಶ, ಯೂರೋಪ್ ಹಾಗೂ ಚೈನಾದ ಮಾರುಕಟ್ಟೆಗಳಲ್ಲಿ ಭಾರತದಲ್ಲಿ ತಯಾರಾದ ಪದಾರ್ಥಗಳಿಗೆ ಹೆಚ್ಚುತ್ತಿದ್ದ ಬೇಡಿಕೆಗಳನ್ನು ಗಮನಿಸಬಹುದು. ಆನೇ ಶತಮಾನದ ನಂತರದ ಕಾಲದಲ್ಲಿ ಹೆಚ್ಚು ಪ್ರಮಾಣದಲ್ಲಿ ನಿರ್ಮಾಣವಾದ ಭೂಒಡುವಳಿಗಳು, ಭಾರತದಲ್ಲಿ ಬಳಕೆದಾರರ ಹೊಸ ವರ್ಗಗಳ ಉಗಮಕ್ಕೆ ಕಾರಣವಾಯಿತು. ಸಣ್ಣ ಪುಟ್ಟ ಗೃಹಕೃತ್ಯದ ಸಂಪ್ರದಾಯದ ಆಚರಣೆಗಳಿಂದ ದೊರೆಯುತ್ತಿದ್ದ ಅಲ್ಪ ಸ್ವಲ್ಪ ಆದಾಯದ ಮೇಲೆ ಅವಲಂಬಿತವಾಗಿದ್ದ ಪುರೋಹಿತರಿಗೆ ಈಗ ಸಾಕಷ್ಟು ಪ್ರಮಾಣದಲ್ಲಿ ಭೂಮಿ, ದಾನ-ದತ್ತಿ ಮತ್ತು ಅಧಿಕಾರದ ಸವಲತ್ತುಗಳು ದೊರಕಿದವು. ಹೀಗೆ ಉಗಮಗೊಂಡ, ಹೊಸ ಭೂಮಾಲೀಕ ಕುಟುಂಬಗಳ ಉನ್ನತ ಮಟ್ಟದ ಜೀವನ ಶೈಲಿ ಆವಶ್ಯಕ ಮತ್ತು ಭೋಗ ವಸ್ತುಗಳ ಬೇಡಿಕೆಯನ್ನು ಹೆಚ್ಚಿಸಿತು. ಅಧಿಕಾರ ಸವಲತ್ತುಗಳ ವಿಘಟನೆಯು ಹೊಸ ಸಾಮಾಜಿಕ ಸಮುದಾಯಗಳನ್ನು ಈಗಾಗಲೇ ಭದ್ರಗೊಂಡಿದ್ದ ಹಿಂದಿನ ಭೂಮಾಲೀಕರ ಗುಂಪಿಗೆ ಸೇರಿಸಿತು. ಇದೇ ರೀತಿ ಸಣ್ಣ ಪುಟ್ಟ ಅಧಿಕಾರಿಗಳು, ಮಧ್ಯಯುಗೀನ ಕಾಲದಲ್ಲಿ ಪರಂಪರಾನುಗತ ಆಸ್ತಿದಾರರಾಗಿ ತಮ್ಮ ಅಧಿಕಾರದಿಂದ ದೊರೆಯುತ್ತಿದ್ದ ಸವಲತ್ತುಗಳಿಂದ ಮತ್ತು ಸೌಲಭ್ಯಗಳಿಂದ ಹಳ್ಳಿಗಳಲ್ಲಿ ಪ್ರಮುಖರೆನಿಸಿ, ತಮ್ಮ ಕೊಳ್ಳುವ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡರು. ಕ್ರಮೇಣವಾಗಿ

ದೇವಸ್ಥಾನಗಳು ಇವುಗಳ ಹಿಡಿತದಲ್ಲಿ ಸಾಕಷ್ಟು ಪ್ರಮಾಣದ ಭೂಮಿ ಮತ್ತು ಸ್ಥಳೀಯ ತೆರಿಗೆಗಳಿಂದ ಬರುತ್ತಿದ್ದ ವರಮಾನಗಳಿದ್ದವು. ಈ ದೇವಸ್ಥಾನಗಳಿಗೆ ವಸ್ತುಗಳ ಉಚಿತ ಪೂರೈಕೆ ಇದ್ದರೂ ಸಹ, ಅವು ಎಲ್ಲಾ ಭೋಗ ವಸ್ತುಗಳ ಪ್ರಮುಖ ಬಳಕೆದಾರರಾಗಿದ್ದವು.[೨೯] ಇತ್ತೀಚಿನ ಅಧ್ಯಯನವು ಮಧ್ಯಯುಗೀನ ದೇವಸ್ಥಾನಗಳು ಹೊಂದಿದ್ದ ಸಂಪತ್ತು ನೀಡುತ್ತಿದ್ದ ಸೇವೆ ಹಾಗೂ ಬದಲಾಗಿ ಸ್ವೀಕರಿಸುತ್ತಿದ್ದ ವಸ್ತುಗಳ ಮಾಹಿತಿ ನೀಡುತ್ತದೆ.[೩೦]

ಸಂಪ್ರದಾಯಗಳಲ್ಲಾದ ಬದಲಾವಣೆಗಳಿಂದ ಹಾಗೂ ಬದಲಾದ ಅಭಿರುಚಿಗಳಿಂದ ತೆಂಗಿನಕಾಯಿ, ಎಲೆ-ಅಡಿಕೆ ಮತ್ತು ಇನ್ನಿತರ ವಸ್ತುಗಳ ಬಳಕೆಯಲ್ಲಿ ಹೆಚ್ಚಳವುಂಟಾಯಿತು. ತೆಂಗಿನಕಾಯಿ ಮತ್ತು ಎಲೆ ಅಡಿಕೆ ಹೊರದೇಶದ ಬೆಳೆಗಳಾಗಿದ್ದು, ಮೊದಲಿನ ಶಾಸನಗಳಲ್ಲಿ ಇವುಗಳ ಉಲ್ಲೇಖವಿಲ್ಲ. ಆದರೆ ೧೧ನೇ ಶತಮಾನದ ತರುವಾಯ ಇವು ಎಲ್ಲಾ ಪವಿತ್ರ ಆಚರಣೆಗಳಲ್ಲಿ ಅತ್ಯವಶ್ಯಕವಾಗಿ ಬೇಕಾಗುವ ಬಳಕೆಯ ವಸ್ತುಗಳಾದವು.

ವಾಯುವ್ಯ ಕರ್ನಾಟಕದಲ್ಲಿ ಹೆಚ್ಚಿದ ವಾಣಿಜ್ಯೀಕರಣವು ಹಣಕಾಸಿನ ಆರ್ಥಿಕತೆಯ ಬೆಳವಣಿಗೆಯನ್ನು ಮತ್ತು ಹೊಸ ನಗರಪಟ್ಟಣಗಳ ಬೆಳವಣಿಗೆಯನ್ನು ಸೂಚಿಸುತ್ತದೆ.[೩೧] ಈ ಹೊಸ ನಗರಗಳ ಹುಟ್ಟು ಹಳ್ಳಿಯಲ್ಲಿ ನಡೆಯುವ ಸಂತೆಯ ಮೂಲದಲ್ಲಿ ಕಾಣಬಹುದು. ಬಹುತೇಕ ಸ್ಥಳಗಳಲ್ಲಿ ಈ ಸಂತೆಗಳನ್ನು ನಡೆಸುತ್ತಿದ್ದವರು ಉತ್ಪಾದಕ ಮತ್ತು ಹಂಚಿಕೆದಾರರ ವರ್ಗಗಳೇ. ವ್ಯಾಪಾರದ ಸ್ಥಳಗಳಿಗೆ ಹತ್ತಿರದಲ್ಲಿ ಬೆಳೆದ ಅಥವಾ ಹುಟ್ಟಿಕೊಂಡ ನಗರ ಪಟ್ಟಣಗಳು, ಕರ್ನಾಟಕದ ಈ ಭಾಗದಲ್ಲಿ ೧೦-೧೩ನೇ ಶತಮಾನಗಳಲ್ಲಿ ಆಗುತ್ತಿದ್ದ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳನ್ನು ಚಿತ್ರಿಸುತ್ತವೆ. ಹೀಗೆ ರಾಜ್ಯದಲ್ಲಿ ಹುಟ್ಟಿಕೊಂಡ ಮೂವತ್ತಾರು ಪಟ್ಟಣಗಳಲ್ಲಿ ಮೂವತ್ತೆರಡು ಪಟ್ಟಣಗಳು ಧಾರವಾಡ, ಶಿವಮೊಗ್ಗ, ಬೆಳಗಾಂ ಮತ್ತು ಬಿಜಾಪುರ ಜಿಲ್ಲೆಗಳಿಗೆ ಸೇರಿದ್ದವು. ಇವುಗಳಲ್ಲಿ ಹದಿನಾರು ಪಟ್ಟಣಗಳು ಧಾರವಾಡ ಜಿಲ್ಲೆಯಲ್ಲಿಯೇ ಕಾಣಸಿಗುತ್ತವೆ.[೩೨]

ಹೊಸ ಪಟ್ಟಣಗಳ ಉಗಮ ಮತ್ತು ಆರ್ಥಿಕತೆಯ ಪುನರುಜ್ಜೀವನಗಳು ವೀರಶೈವ ಮತದ ಮೂಲ ಬೆಂಬಲಿಗರಾದ ಶ್ರೀಮಂತರ ವರ್ಗಗಳನ್ನು ಸೃಷ್ಟಿಸಿದವು. ಈಗಿನ ವೀರಶೈವ ಧರ್ಮದಲ್ಲಿರುವಂತೆ ಆಗಲೂ ಸಹ ಪುರೋಹಿತ, ವ್ಯಾಪಾರ ಹಾಗೂ ಇತರ ಉನ್ನತ ವರ್ಗಗಳು ಆ ಧರ್ಮದ ಪ್ರಮುಖ ಬೆಂಬಲಿಗರಾಗಿದ್ದರು. ಧರ್ಮದ ನೇತೃತ್ವವನ್ನು ವಹಿಸಿಕೊಂಡವರು ಉಚ್ಚ ವರ್ಗದ ಬ್ರಾಹ್ಮಣರಾಗಿದ್ದರು ಇಲ್ಲವೇ ವ್ಯಾಪಾರಸ್ಥ ಕುಟುಂಬದಿಂದ ಅಥವಾ ಪರಂಪರಾನುಗತವಾಗಿದ್ದ ಅಧಿಕಾರ ವರ್ಗಗಳ ಮೂಲದಿಂದ ಬಂದವರಾಗಿದ್ದರು. ಕೆಲವು ನಾಯಕರು ನಗರದಲ್ಲಿದ್ದುಕೊಂಡು ಧರ್ಮಕಾರ್ಯ ಕೈಗೊಂಡರೆ, ಇನ್ನು ಕೆಲವರು ಸರ್ಕಾರದ ಪ್ರಮುಖ ಸ್ಥಾನಮಾನಗಳನ್ನು ಅಲಂಕರಿಸಿದ್ದರು. ಈ ಧರ್ಮವನ್ನು ಸಂಘಟಿಸಿದ ಬಸವನೇ ಬ್ರಾಹ್ಮಣ ಜಾತಿಗೆ ಸೇರಿದವನಾಗಿದ್ದು ಪ್ರಾಂತಾಧಿಕಾರಿ ಕುಟುಂಬದ ಮೂಲದವನು. ಬಸವನು ಮುಖ್ಯಮಂತ್ರಿಯಾಗಿ ಬಿಜ್ಜಳನ ಅಸ್ಥಾನದಲ್ಲಿದ್ದ ಕಾಲವೂ ಈ ಧರ್ಮದ ಇತಿಹಾಸದಲ್ಲಿ ಪ್ರಮುಖವಾದುದು. ಪ್ರಮುಖ ವಚನಕಾರರಲ್ಲಿ ಒಬ್ಬಳಾದ ಅಕ್ಕಮಹಾದೇವಿ ಕೋಟ್ಯಾಧೀಶನ

ಮಗಳು. 'ಬಸವ ಪುರಾಣ'ದಲ್ಲಿರುವಂತೆ ಈ ಧರ್ಮದ ಮೊದಲನೇ ಪ್ರವಚನಕಾರರಲ್ಲಿ ಒಬ್ಬನಾದ ಏಕಾಂತ ರಾಮಯ್ಯನು ಅಳಂದೆ ಎಂಬ ಸ್ಥಳದ ಬ್ರಾಹ್ಮಣ ಕುಟುಂಬಕ್ಕೆ ಸೇರಿದವನು. 'ಸಿದ್ಧರಾಮಪುರಾಣ'ದಲ್ಲಿ ವರ್ಣಿಸಲ್ಪಟ್ಟ ಸಿದ್ಧರಾಮನು ಸೊಲಾಪುರ್ ಪಟ್ಟಣಕ್ಕೆ ಸೇರಿದವನು. ಹಂಪಿಯ ನಿವಾಸಿಗಳಾದ ಹರೀಶ್ವರ ಮತ್ತು ಆತನ ಸೋದರಳಿಯ ರಾಘವಾಂಕ ಲೆಕ್ಕಿಗರ ವಂಶದಿಂದ ಬಂದವರು. 'ದೀಕ್ಷಾಬೋಧೆ'ಯನ್ನು ಬರೆದ ಕೆರೆಯ ಪದ್ಮರಸ ಬಂದನೇ ಹೊಯ್ಸಳ ನರಸಿಂಹ(೧೨೨೦-೩೫)ನ ಆಸ್ಥಾನದಲ್ಲಿದ್ದವರು. ಸುಪ್ರಸಿದ್ಧ 'ಬಸವ ಪುರಾಣ' (೧೩೬೯)ವನ್ನು ಬರೆದ ಭೀಮಕವಿ, ೧೪ನೇ ಶತಮಾನದ ಸ್ಮಾರ್ತ ಪಂಡಿತನೂ ಹೌದು. 'ಪ್ರಭುಲಿಂಗ ಲೀಲೆ'ಯನ್ನು ಬರೆದ ಚಾಮರಸನು ಆರಾಧ್ಯ ಬ್ರಾಹ್ಮಣನಾಗಿದ್ದನು. ಚಾಮರಸನು ಇಮ್ಮಡಿ ಪ್ರೌಢರಾಯನ (೧೪೨೩-೪೬) ಆಸ್ಥಾನದಲ್ಲಿ ಇದ್ದಂತವನು. ವೈಷ್ಣವ ಧರ್ಮದ ವಿರೋಧದ ನಡುವೆಯೂ ವೀರಶೈವ ಧರ್ಮವನ್ನು ಜೀವಂತವಾಗಿರಿಸಿದ ಲಕ್ಕಣ್ಣ ಹಾಗೂ ಜಕಣಾರ್ಯರೂ ಸಹ ಉನ್ನತ ಅಧಿಕಾರದ ಮಂತ್ರಿಗಳಾಗಿ ಪ್ರೌಢದೇವರಾಯನ ಆಸ್ಥಾನದಲ್ಲಿದ್ದವರು. ಈ ಚಳುವಳಿಯು ನಗರಕೇಂದ್ರಿತ ಎನ್ನುವುದಕ್ಕೆ ಚೆನ್ನಬಸವ ಪುರಾಣದಲ್ಲಿ ಪುರಾವೆಗಳಿವೆ. 'ಚೆನ್ನಬಸವನ ಪುರಾಣ'ದ ನಾಯಕನಾದ ಚೆನ್ನಬಸವನು ಕಲ್ಯಾಣ ನಗರದಲ್ಲಿ ೯೬ ಸಾವಿರ ಜಂಗಮರಿಗೆ ಮನೆಗಳನ್ನು ಕಟ್ಟಿಸಿಕೊಡಲು ಬಸವನಿಗೆ ಸೂಚಿಸುತ್ತಾನೆ. ಚೆನ್ನಬಸವನು ಅತಿ ಸುಂದರವಾದ ಅರಮನೆಯಲ್ಲಿ ವಾಸವಾಗಿದ್ದನೆಂದು ತಿಳಿಯುತ್ತದೆ. ಕಲ್ಯಾಣ ನಗರದಲ್ಲಿದ್ದ ಈ ಅರಮನೆಯಲ್ಲಿ ನೃತ್ಯಾಂಗಣ, ಉದ್ಯಾನವನ ಹಾಗೂ ಸಂಗೀತ ಕೇಳುವುದಕ್ಕೆ ಬೇರೆ, ಬೇರೆ ಕೋಣೆಗಳಿದ್ದವು ಎಂಬುದೂ ತಿಳಿದು ಬರುತ್ತದೆ.

ವೀರಶೈವ ಧರ್ಮವನ್ನು ರೂಪಿಸುವಲ್ಲಿ ವ್ಯಾಪಾರ ವರ್ಗದ ಪಾತ್ರ ಹಿರಿದು. ವೀರಶೈವ ಜಾತಿಯ ಶ್ರೇಣೀಕೃತ ಸಮಾಜದಲ್ಲಿ ವ್ಯಾಪಾರ ವರ್ಗದವರು ಜಂಗಮರ ನಂತರದ ಸ್ಥಾನವನ್ನು ಹೊಂದಿರುವವರು. ವೀರಶೈವ ಚಳುವಳಿ ಪ್ರಾರಂಭವಾದುದೇ ವ್ಯಾಪಾರೀ ಸ್ಥಳಗಳಿಂದ. ಈಗಲೂ ಸಹ ಧಾರವಾಡ, ಬೆಳಗಾಂ ಮತ್ತು ಬಿಜಾಪುರ ತಾಲ್ಲೂಕುಗಳಲ್ಲಿ ಕಾಣಸಿಗುವ ವ್ಯಾಪಾರಿ ವರ್ಗಗಳು ಇಲ್ಲಿರುವ ವೀರಶೈವರ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೧೩ ರಿಂದ ೩೧ ರಷ್ಟು ಇದ್ದಾರೆ. ಕುತೂಹಲದ ವಿಷಯವೇನೆಂದರೆ, ಎಲ್ಲಾ ಪ್ರಮುಖ ವ್ಯಾಪಾರಿ ಕೇಂದ್ರಗಳ ಜೊತೆಗೆ ವೀರಶೈವ ಮುಖಂಡರಿಗಿರುವ ಸಂಪರ್ಕ: ವೀರಶೈವ ಧರ್ಮವನ್ನು ಸಂಘಟಿಸಿದ ಬಸವನು ಮತ್ತು ಧರ್ಮದ ಪ್ರಚಾರಗೈದ ಸಿದ್ಧರಾಮನು ಅನುಕ್ರಮವಾಗಿ ಪ್ರಮುಖ ಮಾರುಕಟ್ಟೆ ಕೇಂದ್ರಗಳಾಗಿ ರೂಪುಗೊಳ್ಳುತ್ತಿದ್ದ ಕಲ್ಯಾಣ ಹಾಗೂ ಸೊಲ್ಲಾಪುರದ ಪಟ್ಟಣಗಳ ಮೂಲದವರು. ಕಲ್ಯಾಣ ನಗರವು ಅನೇಕ ಬಜಾರು ಮತ್ತು ರಸ್ತೆಗಳಿದ್ದ ವ್ಯಾಪಾರಿ ಕೇಂದ್ರವಾಗಿತ್ತು. ರಾಘವಾಂಕನ 'ಸೋಮನಾಥ ಚರಿತ್ರೆ'ಯಲ್ಲಿ ವರ್ಣಿಸಲ್ಪಟ್ಟಿರುವ ಸೋಮನಾಥನು ಹೊನ್ನಾವರ ಬಂದರಿಗೆ ಸಂಪರ್ಕವಿದ್ದ ಪುಲಿಗೆರೆ ಎಂಬ ಸ್ಥಳಕ್ಕೆ ಸೇರಿದವನು. ಪುಲಿಗೆರೆಯು ವ್ಯಾಪಾರ ಕೇಂದ್ರಕ್ಕೆ ಸಿಕ್ಕಂತಹ ವಿನಾಯಿತಿ ಹಾಗೂ ರಕ್ಷಣೆಯಿಂದ ಈ ಸ್ಥಳವು ವ್ಯಾಪಾರ ವಹಿವಾಟಿಗೆ ಎಷ್ಟೊಂದು ಪ್ರಾಮುಖ್ಯತೆಯನ್ನು ಪಡೆದಿತ್ತೆಂದು ತಿಳಿಯುತ್ತದೆ. ಏಕಾಂತ ರಾಮನ

ಆಳಂದೆಯು ೧೨-೧೩ನೇ ಶತಮಾನದಲ್ಲಿ ಪ್ರಮುಖ ವ್ಯಾಪಾರಿ ಕೇಂದ್ರಗಳಲ್ಲಿ ಒಂದಾಗಿತ್ತು. ಈ ಪಟ್ಟಣದಲ್ಲಿ ಅನೇಕ ವರ್ತಕರ ವ್ಯಾಪಾರ ವ್ಯವಹಾರಗಳು ಚುರುಕಾಗಿದ್ದವು.[೬೧] ಆಳಂದದ ಸುತ್ತ ಮುತ್ತ ಇದ್ದ ಸ್ಥಳಗಳು ಶ್ರೇಷ್ಠ ಮಟ್ಟದ ಅಕ್ಕಿಯನ್ನು ಬೆಳೆಯುವಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದವು. ವಿಶೇಷವೇನೆಂದರೆ, ಲಿಂಗಾಯತ ಸಾಧು-ಸಂತರ ಧರ್ಮ ಪ್ರಚಾರ ಕಾರ್ಯಗಳು ಈ ವ್ಯಾಪಾರಿ ಸ್ಥಳಗಳಲ್ಲಿ ಹೆಚ್ಚಾಗಿ ಕಂಡುಬರುವಂತಹವು. ಬಸವನ ಮೂಲ ಸ್ಥಳವಾದ ಬಾಗೇವಾಡಿ ಮತ್ತು ಅದರ ಪಕ್ಕಕ್ಕಿದ್ದ ಮನಗೋಳಿ ಅಗ್ರಹಾರಗಳು ಬಿಜಾಪುರ ತಾಲ್ಲೂಕಿನ ಪ್ರಮುಖ ವ್ಯಾಪಾರಿ ಕೇಂದ್ರಗಳಾಗಿ ಬೆಳೆಯುತ್ತಿದ್ದವು. ಜೊತೆಗೆ ಕೊಂಕಣ ಕರಾವಳಿ ವ್ಯಾಪಾರ ಕೇಂದ್ರಗಳೊಂದಿಗೆ ಇವುಗಳು ಸಂಪರ್ಕವನ್ನಿಟ್ಟುಕೊಂಡಿದ್ದವು.

'ಬಸವನ ಪುರಾಣ'ವು ಸಹ ಈ ಧರ್ಮದ ಅನುಯಾಯಿಗಳಾಗಿದ್ದ ದೊಡ್ಡ, ದೊಡ್ಡ ವ್ಯಾಪಾರಿಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಈ ಕೃತಿಯ ಲೇಖಕನು ಈ ಧರ್ಮಕ್ಕಿದ್ದ ಜನಪ್ರಿಯತೆಯನ್ನು ಮನಮುಟ್ಟಿಸುವುದಕ್ಕೆ ಕಲ್ಯಾಣದ ಕೋಟ್ಯಾಧೀಶ ಮತ್ತು ಸಂಚಾರಿ ವ್ಯಾಪಾರಿಯ ಪಾತ್ರಗಳನ್ನು ಸೃಷ್ಟಿಸಿದ್ದಾನೆ., 'ಚೆನ್ನಬಸವ ಪುರಾಣ'ವೂ ಸಹ ಈ ಧರ್ಮಕ್ಕೆ ದೊಡ್ಡ ದೊಡ್ಡ ವ್ಯಾಪಾರಿಗಳ ಮತ್ತು ವ್ಯಾಪಾರ ಸಂಸ್ಥೆಗಳ ಬೆಂಬಲವಿತು ಎಂಬುದನ್ನು ವಿವರವಾಗಿ ತಿಳಿಸುತ್ತದೆ.[೬೨] ಅಕ್ಕಮಹಾದೇವಿಯೂ ವೀರಶೈವ ಧರ್ಮದ ಅನುಯಾಯಿಯಲ್ಲದ ಗಂಡನನ್ನು ಮದುವೆಯಾಗಲು ನಿರಾಕರಿಸಿದ್ದಳು. ವೀರಶೈವ ಧರ್ಮದ ಬಗೆಗಿನ ಮೊದಲ ಶಾಸನಗಳೂ ಸಹ ಈ ಧರ್ಮಕ್ಕೂ ಮತ್ತು ವ್ಯಾಪಾರ-ವಾಣಿಜ್ಯಕ್ಕೂ ಇರುವ ಅವಿನಾ ಸಂಬಂಧವನ್ನು ತಿಳಿಸುತ್ತವೆ. ಕವಿಲಾಸಪುರಹಳ್ಳಿಯು ಜಂಗಮರಿಗಾಗಿ ಅನ್ನದಾಸೋಹದ ಸ್ಥಳವಾಗಿ ಪರಿವರ್ತಿಸಲ್ಪಟ್ಟಿದುದರ ವಿವರಣೆಯನ್ನು ಅರ್ಜುನವಾಡ ಶಾಸನವು ನೀಡುತ್ತದೆ. ಅನ್ನದಾಸೋಹದ ಸೌಕರ್ಯವನ್ನು ಒದಗಿಸುತ್ತಿದ್ದುದು ಸಹ ಒಬ್ಬ ವ್ಯಾಪಾರಿಯೇ.

ನಗರ ಪಟ್ಟಣಗಳಲ್ಲಿದ್ದ ಶ್ರೀಮಂತರೂ ವೀರಶೈವ ಧರ್ಮದ ಬೆಳವಣಿಗೆಗೆ ಪ್ರಮುಖ ಕಾರಣಕರ್ತರು. ದೇವಸ್ಥಾನದ ಪುರೋಹಿತರ ತರಹ ಯಾವುದೇ 'ಚಿರ' ಆಸ್ತಿಯನ್ನು ಹೊಂದದ ಸಂಚಾರಿ ಜಂಗಮ ನಗರದ ಶ್ರೀಮಂತರ, ದೊಡ್ಡ-ಚಿಕ್ಕ ವ್ಯಾಪಾರಿಗಳ ಹಾಗೂ ಮಾಲೀಕರ ಮೇಲೆ ಅವಲಂಬಿತವಾಗಿದ್ದರು. ಬ್ರಾಹ್ಮಣ ಪುರೋಹಿತರಿಗೆ ಸಿಗುತ್ತಿದ್ದ ಬಳುವಳಿಗಳು ಇವರಿಗೆ ಸಿಗದೇ ಇರುತ್ತಿದುದರಿಂದ ಇವರ ಆಶ್ರಯವನ್ನು ಅವಲಂಬಿಸಿದ್ದರು.

ಈ ಚಳುವಳಿಯಲ್ಲಿ ಸ್ಮಾರ್ತ ಬ್ರಾಹ್ಮಣರು ಅಧಿಕ ಸಂಖ್ಯೆಯಲ್ಲಿ ಇದ್ದುದು ಮತ್ತು ಮಠಾಧಿಪತಿಗಳಾಗಿ ಅವರ ಪ್ರಭಾವ, ವೀರಶೈವ ಧರ್ಮದ ಹುಟ್ಟಿನ ಕಾಲದಲ್ಲಿದ್ದ ಸಾಮಾಜಿಕ ಪರಿಸರವನ್ನು ತಕ್ಕಮಟ್ಟಿಗೆ ವಿವರಿಸುತ್ತವೆ.[೬೪] ವೇದ, ಉಪನಿಷತ್ತುಗಳ ಮೇಲೆ ಹಿಡಿತವಿದ್ದ ಸ್ಮಾರ್ತ ಬ್ರಾಹ್ಮಣರಿಗೆ, ಇತರ ಸಣ್ಣ ಪುಟ್ಟ ಪುರೋಹಿತರಿಗಿಂತ ತಾವೇ ಶ್ರೇಷ್ಠರು ಎಂಬ ಭಾವನೆಯಿತ್ತು. ಈ ಸಣ್ಣ ಪುಟ್ಟ ಪುರೋಹಿತರು ದೇವಸ್ಥಾನದ ಸಂಪ್ರದಾಯಬದ್ಧ ಪೂಜಾ ವಿಧಾನಗಳ ಜೊತೆಗೆ, ಇತರ ದೇವ ದೇವತೆಗಳ ಪೂಜಾ ಕಾರ್ಯಗಳನ್ನು ನಡೆಸುತ್ತಿದ್ದುದು ಸ್ಮಾರ್ತ ಬ್ರಾಹ್ಮಣರ ಖಂಡನೆಗೆ ಗುರಿಯಾಗುತ್ತಿತ್ತು. ಪಲ್ಲವರ ಕಾಲದಲ್ಲಿ ತಮಿಳುನಾಡಿನ

ವೈಷ್ಣವ ಅನುಯಾಯಿಗಳಾದ ಆಳ್ವಾರರು ಮತ್ತು ಶೈವ ಅನುಯಾಯಿಗಳಾದ ನಾಯನಾರರು ಭಿನ್ನಮತ ಪ್ರಚಾರವನ್ನು ಆರಂಭಿಸಿದಾಗ, ಭೂಮಾಲೀಕರ ಆಶ್ರಯದಲ್ಲಿದ್ದ ಸ್ಮಾರ್ತ ಬ್ರಾಹ್ಮಣರು ಹೊಸ ಧರ್ಮಗಳ ಜನಪ್ರಿಯತೆಯನ್ನು ತಡೆಯಲು ಪ್ರಯತ್ನಿಸಿದರು. ಇದೇ ಸಮಯದಲ್ಲಿ ಅರ್ಧ ಸ್ಮಾರ್ತ ಮತ್ತು ಅರ್ಧ ಹೊಸ ಭಿನ್ನಮತಗಳ ಸಂಪ್ರದಾಯಗಳನ್ನು ಅಳವಡಿಸಿಕೊಂಡಿದುದರ ಫಲವಾಗಿ 'ಪಂಚಾಯತನ' ಮತವು ಹುಟ್ಟಿಕೊಂಡಿತು.

ಸ್ಮಾರ್ತ ಬ್ರಾಹ್ಮಣರಿಗೆ ದೊರೆಯುತ್ತಿದ್ದ ಭೂಕಾಣಿಕೆ ಮತ್ತು ಇತರ ದಾನ ದತ್ತಿಗಳನ್ನು ಖಂಡಿಸುವುದು ಈ ಕಾಲದಲ್ಲಿ ರಚನೆಗೊಂಡ ನಾಯನಾರರ ಹಾಡುಗಳಲ್ಲಿ ಪ್ರಮುಖ ಅಂಶವಾಗಿತ್ತು. ಇವರು ಶೈವ ಅನುಯಾಯಿಗಳಿಗೆ ದೊರೆಯುತ್ತಿದ್ದ ರಾಜಾಶ್ರಯವು ಸ್ಮಾರ್ತ ಬ್ರಾಹ್ಮಣರಿಗಿಂತ ಶ್ರೇಷ್ಠವಾದುದೆಂದು ಭಾವಿಸಿದ್ದರು ಮತ್ತು ಆ ಶ್ರೇಷ್ಠತೆಯನ್ನೇ ಪ್ರಚಾರ ಮಾಡುತ್ತಿದ್ದರು. ಇದಕ್ಕೆ ವಿರುದ್ಧವಾಗಿ ಸ್ಮಾರ್ತ ಅನುಯಾಯಿಗಳು ಶೈವಮತವನ್ನು ಮತ್ತು ಅದರ ಅನುಯಾಯಿಗಳನ್ನು ಜರೆಯುವಲ್ಲಿ ಹಿಂದೆ ಬಿದ್ದಿರಲಿಲ್ಲ. ಸಂಪ್ರದಾಯಸ್ಥ ಬ್ರಾಹ್ಮಣದ ಪ್ರತಿನಿಧಿಗಳಾಗಿದ್ದ ಮನು ಮತ್ತು ವಿಷ್ಣು ಇವರು ಸಂಪ್ರದಾಯ ಪುರೋಹಿತರನ್ನು ಖಂಡಿಸುತ್ತಿದುದು ತಿಳಿದುಬರುತ್ತದೆ. ಬೇರೆ ಮತ ಪ್ರಚಾರಕರು ವೇದ ಉಪನಿಷತ್ತುಗಳನ್ನು ಅಧ್ಯಯನ ಮಾಡುವುದನ್ನು ಸಂಪ್ರದಾಯಸ್ಥ, ಬ್ರಾಹ್ಮಣ ಪುರೋಹಿತರು ಖಂಡಿಸುತ್ತಿದ್ದರು. ಭಿನ್ನಮತೀಯರು ಅಪವಿತ್ರರೆಂದು ಜರಿಯಲ್ಪಟ್ಟಿದ್ದರು. ಸಂಪ್ರದಾಯಸ್ಥ ಬೌದ್ಧಿಕ ಪುರೋಹಿತರ ಮತ್ತು ಭಿನ್ನಮತೀಯ ಪುರೋಹಿತರ ನಡುವೆ ಬೆಳೆಯುತ್ತಿದ್ದ ಘರ್ಷಣೆಯನ್ನು ಉಸಾನ, ವೃದ್ಧಹರಿತ ಮತ್ತು ಅಪಾರಕರು ತಿಳಿಸಿದ್ದಾರೆ.

ತಮಿಳುನಾಡಿನಂತೆ ಕರ್ನಾಟಕದಲ್ಲೂ ಸಹ ಸ್ಮಾರ್ತರು ಭಿನ್ನಮತೀಯ ಚಳುವಳಿಗಳಿಂದ ದೂರವಿದ್ದರು. ವೀರಶೈವ ಧರ್ಮದ ಮೊದಲಿನ ಮುಖಂಡರು ಉನ್ನತ ಬ್ರಾಹ್ಮಣರಾಗಿದ್ದರೂ, ಏಕಾಂತ ರಾಮಯ್ಯನು ಅಬಲೂರಿನ ಶೈವರೊಂದಿಗೆ ಸಂಪರ್ಕವಿಟ್ಟುಕೊಂಡಿದ್ದನ್ನು ಬಿಟ್ಟರೆ, ಉಳಿದ ಇನ್ಯಾರೂ ಭಿನ್ನಮತೀಯರ ಜೊತೆ ಸಂಬಂಧವನ್ನಿಟ್ಟುಕೊಂಡಿರಲಿಲ್ಲ. ಕೆಲವು ಸ್ಮಾರ್ತರು ಸಂಪ್ರದಾಯವನ್ನು ಮುರಿದರೂ, ಪುರೋಹಿತ ಉದ್ಯೋಗವನ್ನು ಒಪ್ಪಿಕೊಂಡಿದ್ದರು. ಆದರೆ ಬಹಳಷ್ಟು ಸ್ಮಾರ್ತರು ಸ್ಥಾವರ ಮೂರ್ತಿಪೂಜಕ ಸಂಪ್ರದಾಯವನ್ನು ವಿರೋಧಿಸಿದ ಮತ್ತು ಸಂಕೇತಗಳ ಆರಾಧನೆಯನ್ನು ಪ್ರತಿಪಾದಿಸಿದ ಹೊಸ ಧರ್ಮದ ಸ್ಥಾಪನೆಯನ್ನು ಇಷ್ಟಪಟ್ಟರು. ಬಸವನಿಗೆ ಷಟ್‌ಸ್ಥಲಗಳನ್ನು ಬೋಧಿಸಿದ ಅಲ್ಲಮಪ್ರಭುವು ಬಹಿರಂಗ ಆಚಾರಗಳನ್ನು ನಿಂದಿಸಿ, ಮುಕ್ತಿಗಾಗಿ ಧ್ಯಾನದ ಮಹತ್ವವನ್ನು ಎತ್ತಿ ಹಿಡಿದನು. [illegible]ನೇ ಶತಮಾನದ 'ಸಿದ್ಧಾಂತ ಶಿಖಾಮಣಿ'ಯೂ ಸಹ 'ಅಂತರ ಭಕ್ತಿಯ' ಮಹತ್ವವನ್ನು ತಿಳಿಸುತ್ತದೆ. ಯಾವನೇ ವೀರಶೈವನು ಸ್ಥಾವರ ದೇವರನ್ನು ಪೂಜಿಸುವುದನ್ನು ನಿಷೇಧಿಸಿರುದು 'ಸಿದ್ಧಾಂತ-ಶಿಖಾಮಣಿ'ಯ ವಿಶೇಷ. ಸಂಪ್ರದಾಯಸ್ಥ ಬ್ರಾಹ್ಮಣ ಧರ್ಮಕ್ಕೆ ವೀರಶೈವ ಧರ್ಮದಿಂದ ವ್ಯಕ್ತವಾಗುತ್ತಿದ್ದ ವಿರೋಧಗಳನ್ನು ಲಿಂಗಾಯತ ಸಾಧು-ಸಂತರ ಪುರಾಣಗಳಿಂದ ತಿಳಿಯಬಹುದು. ಈ ಪುರಾಣಗಳು ವೇದ ಬ್ರಾಹ್ಮಣರನ್ನು ಖಂಡಿಸುವಲ್ಲಿ ನಿರತವಾಗಿವೆ.

ವೀರಶೈವ ಚಳುವಳಿಯನ್ನು ಸೇರಿದ ಸ್ಮಾರ್ತ ಬ್ರಾಹ್ಮಣರು ತಮ್ಮ ಶ್ರೇಷ್ಠತೆಯನ್ನು ಪ್ರತಿಪಾದಿಸುವುದಲ್ಲದೆ, ಧರ್ಮದ ಇತರ ಬ್ರಾಹ್ಮಣೇತರ ಸದಸ್ಯರ ಜೊತೆಗೆ ತಮ್ಮ ಉನ್ನತ ಸ್ಥಾನಮಾನಗಳನ್ನು ಹಂಚಿಕೊಳ್ಳಲೂ ಹಿಂಜರಿದರು. ವಚನಕಾರರು ಭ್ರಾತೃತ್ವ-ಸಮಾನತೆಯನ್ನು ಪ್ರತಿಪಾದಿಸಿದರೂ, ಬಹುತೇಕ ವೀರಶೈವ ಕೃತಿಗಳು ಬ್ರಾಹ್ಮಣ ಪ್ರತಿಪಾದಿತ ಜಾತಿ-ಶ್ರೇಣಿಗೆ ವಿಧೇಯತೆಯನ್ನು ಉಪದೇಶಿಸುತ್ತವೆ.[೪೬] ಕರ್ನಾಟಕದಲ್ಲಿ ಈ ರೀತಿಯಾಗಿ ವರ್ಣಾಶ್ರಮ ಪ್ರಕಾರ ಪುನಾರಚನೆಗೊಂಡ ಶೈವ ಸಮುದಾಯವು ದೈವೀ ಪ್ರೇರಿತವಾದುದೆಂದು ಭೀಮಕವಿ ಒತ್ತಿ ಹೇಳುತ್ತಾನೆ.[೪೭] ಬಾದರಾಯಣ ಶ್ರೀಪತಿ ಪಂಡಿತನು 'ಬ್ರಹ್ಮ ಸೂತ್ರದ' ಮೇಲೆ ಬರೆದ 'ಶ್ರೀಕರ ಭಾಷ್ಯ'ದಲ್ಲಿ ಅಂತಿಮ ಮುಕ್ತಿಗಾಗಿ ಬೇಕಾದ ಅವಶ್ಯಕತೆಗಳ ಬಗ್ಗೆ ಬರೆಯುತ್ತಾನೆ. ಅವನ ಪ್ರಕಾರ ಜಾತಿ ಧರ್ಮವನ್ನು ಮತ್ತು ವೇದ ಕರ್ಮಗಳನ್ನು ಸರಿಯಾಗಿ ಪಾಲಿಸುವುದೇ ಅಂತಿಮ ಮುಕ್ತಿಗೆ ಸಾಧನಗಳು.[೪೮] ಇವುಗಳನ್ನು ಪಾಲಿಸಲು ಯಾರಾದರು ವಿಫಲವಾದರೆ, ಅವರು ಖಂಡನಾರ್ಹರು ಎಂದು ಹೇಳುತ್ತಾನೆ. ಜೊತೆಗೆ ವೇದ ಕರ್ಮಗಳನ್ನು ಜೀವನದ ಎಲ್ಲಾ ಹಂತಗಳಲ್ಲೂ ಪಾಲಿಸಬೇಕೆಂದಿದ್ದಾನೆ.[೪೯] ವೀರಶೈವದಲ್ಲಿನ 'ಸಾಮಾನ್ಯ' 'ವಿಶೇಷ' ಮತ್ತು 'ನಿರಾಭರಣ' ಎಂಬ ವರ್ಗೀಕರಣವು ಸಾಮಾಜಿಕ ಆದ್ಯತೆಯ ಆಧಾರದ ಮೇಲೆ ರೂಪುಗೊಂಡತವು. ಇದು ವೀರಶೈವ ಧರ್ಮದಲ್ಲಿನ ಆಂತರಿಕವರ್ಗಗಳ ಬಗ್ಗೆ ತಿಳಿಸುತ್ತದೆ. ಲಿಂಗಾಯತರ ಜನಸಂಖ್ಯೆ ಅಧ್ಯಯನದ ಪ್ರಕಾರ ಈ ಧರ್ಮದ ಸ್ಮಾರ್ತ್ ಮುಖಂಡರು ಇನ್ನಿತರ ಲಿಂಗಾಯತರಿಂದ ಆಗಲೆ ಬೇರೆಯಾಗಿದ್ದರು. ಇವರು ಇತರ ಲಿಂಗಾಯತರ ಜೊತೆಗೆ ಅಂತರ ಜಾತೀಯ ವಿವಾಹವಾಗಲೀ ಅಥವಾ ಭೋಜನವಾಗಲೀ ಮಾಡುತ್ತಿರಲಿಲ್ಲ. ತೆಲುಗು ಮತ್ತು ಕೆನರಾ ಜಿಲ್ಲೆಗಳ ಲಿಂಗಾಯತರು ತಾವು ಉನ್ನತ ವಂಶದವರೆಂದು ಭಾವಿಸಿದ್ದರು. ಹೊಸ ಧರ್ಮಕ್ಕೆ ಹೊಂದಿಕೊಂಡುದುದರ ಸಂಕೇತವಾಗಿ ಜನಿವಾರವನ್ನು ಧರಿಸುವುದರ ಜೊತೆಗೆ ಲಿಂಗವನ್ನೂ ಕಟ್ಟಿಕೊಳ್ಳುತ್ತಿದ್ದರು.[೫೦]

ಆರಾಧ್ಯ ಬ್ರಾಹ್ಮಣರ ನಂತರ ಈ ಮತದ ಶ್ರೇಣೀಕೃತ ಸ್ಥಾನದಲ್ಲಿ ಕೆಳ ಹಂತದ ಪುರೋಹಿತರು ಬಹಳಷ್ಟು ಸಂಖ್ಯೆಯಲ್ಲಿದ್ದರು. ಆಗ ಇವರಿಗೆ ಸಿಗುತ್ತಿದ್ದ ಗೌರವ ಕಡಿಮೆ, ಕರ್ನಾಟಕದ ಬೇರೆ, ಬೇರೆ ದೇವಸ್ಥಾನಗಳಲ್ಲಿ ಪೌರೋಹಿತ್ಯವನ್ನು ನಡೆಸುತ್ತಿದ್ದ ಇವರನ್ನು ವೀರಶೈವ ಮುಖಂಡರು ತಮ್ಮೆಡೆಗೆ ಸೆಳೆದು, ವೀರಶೈವ ಮತಕ್ಕೆ ಮತಾಂತರಿಸಿದರು. 'ಬಸವ ಪುರಾಣ'ದಲ್ಲಿ ೧೨ ಸಾವಿರ ಸ್ವೇಚ್ಛಾಚಾರಿ ಪುರೋಹಿತರ ಬಗ್ಗೆ ಪದೇ ಪದೇ ಉಲ್ಲೇಖವಿರುವುದು ಹೊಸ ಮತಾಂತರಗಳ ಬಗ್ಗೆ ತಿಳಿಸುತ್ತವೆ.

'ಸ್ವೇಚ್ಛಾಚಾರಿ ಪುರೋಹಿತ' ಎಂಬ ಪದವು ಅರ್ಥಪೂರ್ಣ ಏಕೆಂದರೆ, ಇದು ಸಮಕಾಲೀನ ಶೈವ ದೇವಸ್ಥಾನಗಳಲ್ಲಿ ನಡೆಯುವ ಭ್ರಷ್ಟತೆಯನ್ನು ಸೂಚಿಸುತ್ತದೆ. ಈ ಕಾಲದ ಶಾಸನಗಳು ಪುರೋಹಿತರ ಮತ್ತು ಸಾಧು-ಸನ್ಯಾಸಿಗಳ ನೀತಿಗೆಟ್ಟ ನಡವಳಿಕೆಗಳನ್ನು ಉಲ್ಲೇಖಿಸುತ್ತವೆ. ಇವರಲ್ಲಿ ಕೆಲವರು ದೇವಸ್ಥಾನದ ನೃತ್ಯಗಾರ್ತಿಯರ ಜೊತೆಗೆ ಸಂಬಂಧವಿರಿಸಿಕೊಂಡುದು ತಿಳಿದುಬರುತ್ತದೆ. ಈ ಶಾಸನಗಳು ಸಾಧು-ಸಂತರ ಅನೈತಿಕ ನಡವಳಿಕೆಯ ವಿರುದ್ಧ

ಭೂಮಿಯ ವರ್ಗಾವಣೆ ಆದುದು, ಭೂಮಿಯ ಮೇಲಿನ ಸಾಮೂಹಿಕ ಹಕ್ಕುಗಳನ್ನು ಮುರಿದಂತಾಯಿತು. ಇದರ ಜೊತೆಗೆ ಭೂಮಿ ಉಳುವ ವ್ಯಕ್ತಿಗೆ ಯಾವುದೇ ಸಮಯದಲ್ಲಿ ತನ್ನನ್ನು ಹೊರಹಾಕಲ್ಪಡುವ ಭಯವಿದ್ದೇ ಇತ್ತು. ಕೆಲವು ಶಾಸನಗಳ ಪ್ರಕಾರ ಭೂಮಿಯನ್ನು ಬಳುವಳಿಯಾಗಿ ಪಡೆದವನು ಮೂಲ ಉಳುಮೆಗಾರನನ್ನು ಉಳುಮೆಯಿಂದ ಹೊರಹಾಕುವ ಹಕ್ಕನ್ನು ಪಡೆದವನಾಗಿದ್ದನು. ಅಥವಾ ಭೂಮಿಯ ವರ್ಗಾವಣೆ ಆಗುವ ಮೊದಲನೇ ಮೂಲ ಉಳುಮೆಗಾರರನ್ನು ಹೊರಹಾಕುವ ಪದ್ಧತಿಯು ಜಾರಿಯಲ್ಲಿತ್ತು. ಕೆಲವೊಮ್ಮೆ ನಿಗದಿತ ಕಂದಾಯವನ್ನು ಸಂದಾಯ ಮಾಡುವುದಕ್ಕೆ ವಿಫಲವಾದುದರ ಫಲವಾಗಿ ಉಳುಮೆಗಾರರನ್ನು ಬದಲಾಯಿಸಿದ ಮಾಹಿತಿಗಳಿವೆ. ಭೂಮಿಯನ್ನು ಬಳುವಳಿಯಾಗಿ ಪಡೆದ ಭೂಮಾಲೀಕರು ಆಳುಗಳಿಗೆ ಸರಿಯಾಗಿ ಕೂಲಿ ಕೊಡದೆ, ಶೋಷಣೆಗೊಳಪಡಿಸಿದ್ದರು.

ಭೂಮಾಲೀಕರ ಈ ಶೋಷಣೆಗೆ ಗ್ರಾಮ ಸಮುದಾಯಗಳು ವಿರೋಧ ವ್ಯಕ್ತ ಪಡಿಸುದುದರ ಬಗ್ಗೆ ಅಷ್ಟೇನೂ ದಾಖಲೆಗಳಿಲ್ಲ. ಆದರೂ ಅವು ಅರ್ಥಗರ್ಭಿತವಾಗಿವೆ. ೧೨೩೦ರಲ್ಲಿ ರೈತರು (ಗೌಡರು) ತಮ್ಮ ಗ್ರಾಮಗಳನ್ನು 'ಮಾನ್ಯ ಇನಾಂಗ್ರಾಮ'ಗಳನ್ನಾಗಿ ಪರಿವರ್ತಿಸುವುದಕ್ಕೆ ವಿರೋಧ ವ್ಯಕ್ತಪಡಿಸಿದುದು ತಿಳಿದುಬರುತ್ತದೆ. ಈ ವಿರೋಧವು ರಾಜನ ಆಜ್ಞೆಗೆ ವಿರೋಧವಾಗಿತ್ತು. ಇದರಿಂದ ಕೋಪಗೊಂಡ ರಾಜನು ವಿರೋಧವನ್ನು ಹತ್ತಿಕ್ಕಲು ಸೈನ್ಯವನ್ನು ಕಳುಹಿಸಿದರ ಬಗ್ಗೆ ವಿವರಗಳಿವೆ. ಸೈನ್ಯವು ಗ್ರಾಮವನ್ನು ಲೂಟಿ ಮಾಡಿದುದಲ್ಲದೆ, ಗ್ರಾಮದ ಹೆಂಗಸರ ಮತ್ತು ದನಕರುಗಳ ಮೇಲೆ ಆಕ್ರಮಣ ಮಾಡಿತು. ಸಮುದಾಯದ ಒಡೆತನಲ್ಲಿದ್ದ ತಾಳೆ ವೃಕ್ಷ, ನೀರಿನ ನಾಲೆ ಮತ್ತು ಇತರೆ ಆಸ್ತಿಗಳನ್ನು, ಬಳುವಳಿಯಾಗಿ ವರ್ಗಾಯಿಸುವುದಕ್ಕೆ ಮೂಲ ನಿವಾಸಿಗಳಿಂದ ವ್ಯಕ್ತವಾದ ವಿರೋಧದ ಬಗೆಗೂ ದಾಖಲೆಗಳು ದೊರೆಯುತ್ತವೆ. ಈ ತರಹದ ವಿರೋಧವು ಕೆಲವೊಮ್ಮೆ ಘರ್ಷಣೆಗೆ ತಿರುಗಿ, ಅಪಾರ ಹಾನಿ ಮತ್ತು ರಕ್ತಪಾತಕ್ಕೆ ಒಳಗಾದ ನಿದರ್ಶನಗಳಿವೆ.

ರೈತರ ಮತ್ತು ಇತರ ಕಸುಬುದಾರರ ಶೋಷಣೆಯು ಮುಖ್ಯವಾಗಿ ಮೇಲೆ ತಿಳಿಸಿದ ಮೂರು ಜಿಲ್ಲೆಗಳಾದ, ಧಾರವಾಡ, ಬಿಜಾಪುರ ಮತ್ತು ಬೆಳಗಾಂನಲ್ಲಿ ಕಂಡುಬರುತ್ತದೆ. ಈ ಜಿಲ್ಲೆಗಳಲ್ಲಿನ ಒಟ್ಟು ಜನಸಂಖ್ಯೆಯ ಶೇಕಡ ೭೦ರಷ್ಟು ಜನ ರೈತ ಮತ್ತು ಇತರ ಕಸುಬುದಾರ ಮೂಲಗಳಿಂದ ಬಂದವರು. ಭೂಮಿಯ ಒಡೆತನವನ್ನು ಬಳುವಳಿಯಾಗಿ ಸ್ವೀಕರಿಸಲ್ಪಟ್ಟವರಲ್ಲಿ ಬ್ರಾಹ್ಮಣರು ಪ್ರಮುಖರು. ಈ ರೀತಿಯಾಗಿ ಬಳುವಳಿಯನ್ನು ಪಡೆದ ನೂರಾ ಮುವತ್ತೈದು ಬ್ರಾಹ್ಮಣರಲ್ಲಿ ಎಪ್ಪತ್ತೆಂಟು ಬ್ರಾಹ್ಮಣರು ಧಾರವಾಡ, ಬಿಜಾಪುರ, ಬೆಳಗಾಂ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಕಾಣಸಿಗುತ್ತಾರೆ. ಈ ಸ್ಥಳದಲ್ಲಿ ಹೆಚ್ಚಿನ ಸಂಖ್ಯೆಯ ಧಾರ್ಮಿಕ ಸಂಸ್ಥೆಗಳನ್ನು ಕಾಣಬಹುದು. ಈ ಧಾರ್ಮಿಕ ಸಂಸ್ಥೆಗಳು ವ್ಯವಸಾಯಕ್ಕೆ ಮತ್ತು ಗ್ರಾಮ ಕೈಗಾರಿಕೆಗಳಿಗೆ ಬೇಕಾದ ಮಾನವ ಸಂಪನ್ಮೂಲವನ್ನು ಹತೋಟಿಯಲ್ಲಿಟ್ಟುಕೊಂಡಿದ್ದವು. ಶಾಸನಗಳ ಪ್ರಕಾರ ೧೧ನೇ ಶತಮಾನದ ಪ್ರಾರಂಭದಲ್ಲಿ ನಲವತ್ತೆಂಟು ದೊಡ್ಡ ದೇವಸ್ಥಾನಗಳು ಅಭಿವೃದ್ಧಿ ಪಥದಲ್ಲಿದ್ದವು. ಇದರಲ್ಲಿ ೩೧ ದೇವಸ್ಥಾನಗಳು ಧಾರವಾಡ, ಬಿಜಾಪುರ ಮತ್ತು ಬೆಳಗಾಂ ಜಿಲ್ಲೆಗಳಲ್ಲೇ ಕಾಣಸಿಗುತ್ತವೆ.

ಈಗಲೂ ಈ ಸ್ಥಳದ ಲಿಂಗಾಯತರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವವರು ನೇಕಾರರು ಮತ್ತು ಗಾಣಿಗರು.

ಕರ್ನಾಟಕದ ನೇಕಾರ ಜಾತಿಯವರಿಗೆ, ವಿಶೇಷವಾಗಿ ಹತ್ತಿ ಬೆಳೆಯುವ ಜಿಲ್ಲೆಗಳಾದ ಬೆಳಗಾಂ ಮತ್ತು ಬಿಜಾಪುರಗಳಲ್ಲಿ ವೀರಶೈವ ಧರ್ಮವು ಎಷ್ಟೊಂದು ಪ್ರಸ್ತುತವಾಗಿತ್ತು ಎಂಬ ವಿವರಗಳನ್ನು ಈ ಧರ್ಮದ ಮೊದಲಿನ ಸಾಹಿತ್ಯದಲ್ಲಿ ಕಾಣಬಹುದು. ಬಿಜಾಪುರ ಜಿಲ್ಲೆಯಲ್ಲಿ ಕಾಣಬರುವ ನೇಕಾರರೆಲ್ಲ ಲಿಂಗಾಯತ ಜಾತಿಗೆ ಸೇರಿದವರು. ಬೆಳಗಾಂನಲ್ಲಿ ಲಿಂಗಾಯತ ನೇಕಾರರು ಶೇ. ೧೮ ರಷ್ಟಿದ್ದಾರೆ. ಧಾರವಾಡದಲ್ಲಿ ಲಿಂಗಾಯತ ನೇಕಾರರು ಮತ್ತು ಗಾಣಿಗರು ಶೇ. ೧೧ರಷ್ಟಿದ್ದಾರೆ. ಕರ್ನಾಟಕದ ಇತರ ಸ್ಥಳಗಳಲ್ಲಿಯೂ ಲಿಂಗಾಯತರು ಇಷ್ಟೇ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

ನೇಕಾರ ವೃತ್ತಿಯು ಕರ್ನಾಟಕದಲ್ಲಿ ಮುಖ್ಯ ಕಸುಬಾಗಿತ್ತು ಎಂದು ಹೊರ ದೇಶದ ಮತ್ತು ಸ್ಥಳೀಯ ದಾಖಲೆಗಳಿಂದ ತಿಳಿದುಬರುತ್ತದೆ. ೧೦-೧೩ನೇ ಶತಮಾನದ ಉತ್ತರ ಕರ್ನಾಟಕಲ್ಲಿ ಬಟ್ಟೆ ಉದ್ಯಮವು ಬೃಹತ್ ಆರ್ಥಿಕ ಚಟುವಟಿಕೆಯಾಗಿತ್ತು. ಹತ್ತಿ ಪ್ರಮುಖ ಬೆಳೆಯಾಗಿತ್ತು. ಧಾರವಾಡ ಮತ್ತು ಬೆಳಗಾಂ ಜಿಲ್ಲೆಗಳಲ್ಲಿ ಕಂಡುಬರುವ ಶಾಸನಗಳಲ್ಲಿ ನೇಕಾರರ ಸಂಘಗಳ ಅಸ್ತಿತ್ವದ ಬಗ್ಗೆ ವಿವರಗಳು ಸಿಗುತ್ತವೆ.

ಈಗ ಲಿಂಗಾಯತರಲ್ಲಿ ಪಂಚಮಸಾಲಿಯೇತರರೆಂದು ಕರೆಯಲ್ಪಡುವ ನೇಕಾರರು, ಸಿಂಪಿಗರು ಮತ್ತು ಗಾಣಿಗರು ಪುರೋಹಿತ ಮಧ್ಯವರ್ತಿಗಳ ಮತ್ತು ರಾಜ್ಯದ ರಾಜರುಗಳ ಶೋಷಣೆಯಿಂದ, ಅತಿಯಾದ ಕಂದಾಯ ವಸೂಲಿಯಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ವೀರಶೈವ ಚಳುವಳಿಯನ್ನು ಸೇರಿದರು. ಕಂದಾಯ ವಸೂಲಿಯು ವಸ್ತು ಮತ್ತು ಹಣದ ರೂಪದಲ್ಲಿ ಜಾರಿಯಲ್ಲಿತ್ತು. ಮಗ್ಗದ ಯಂತ್ರಗಳ ಮೇಲೆ, ಸಿಂಪಿಗರ ಉತ್ಪಾದನೆಯ ಮೇಲೆ ಕಂದಾಯ ಹೇರುತ್ತಿದುದರ ಬಗ್ಗೆಯೂ ಸಹ ದಾಖಲೆಗಳು ದೊರೆಯುತ್ತವೆ. ಈ ರೀತಿಯ ಕಂದಾಯ ವಸೂಲಿಯಿಂದ ಅತೃಪ್ತರಾದ ನೇಯ್ಗೆಯ ಸಂಘಗಳು, ಕಂದಾಯ ವಸೂಲಿಯ ರಿಯಾಯಿತಿಗಾಗಿ ಅಥವಾ ಮರುಪರಿಶೀಲನೆಗೆ ಅಹವಾಲುಗಳನ್ನು ಮತ್ತು ಪ್ರತಿನಿಧಿಗಳನ್ನು ಕಳುಹಿಸಿದುದರ ಬಗ್ಗೆ ವಿವರಗಳು ಸಿಗುತ್ತವೆ. ತೆರಿಗೆ ವಸೂಲಿಯ ಜೊತೆಗೆ ಮಗ್ಗದ ಕಾರ್ಖಾನೆಗಳನ್ನು ಮತ್ತು ಬಟ್ಟೆ ಹೊಲೆಯುವ ಸ್ಥಳಗಳನ್ನು ಧಾರ್ಮಿಕ ಸಂಸ್ಥೆಗಳಿಗೆ ವರ್ಗಾಯಿಸುವ ಪರಿಪಾಟವೂ ಇತ್ತು. ಇದರಿಂದ ಈ ಕಸುಬಿನಲ್ಲಿದ್ದ ಕೆಲಸಗಾರರಿಗೆ ಯಾವುದೇ ತರಹದ ಸ್ವಾತಂತ್ರ್ಯ ಸಿಗದೆ ತಮ್ಮ ವ್ಯಾಪಾರವನ್ನು ವೃದ್ಧಿಸುವ ಅವಕಾಶಗಳನ್ನು ಕಳೆದುಕೊಳ್ಳುತ್ತಿದ್ದರು. ಹತ್ತಿ ಬೆಳೆಯುವ ಜಮೀನನ್ನು ಈ ರೀತಿಯಾಗಿ ವರ್ಗಾಯಿಸುತ್ತಿದ್ದರಿಂದ ಹತ್ತಿ ಬೆಳೆಯ ಉತ್ಪಾದನೆಗೆ ಪ್ರೋತ್ಸಾಹ ಸಿಗುತ್ತಿರಲಿಲ್ಲ. ಇದಕ್ಕೆ ಕಾರಣ ಧಾರ್ಮಿಕ ಸಂಸ್ಥೆಗಳಿಗೆ ಹತ್ತಿಯಿಂದ ಅಷ್ಟೇನು ಪ್ರಯೋಜನವಾಗುತ್ತಿರಲಿಲ್ಲ. ಈ ಪರಿಸ್ಥಿತಿಯು ಹತ್ತಿ ಬೆಳೆಗಾರರನ್ನು ಪುರೋಹಿತ ಭೂಮಾಲೀಕರ ಅಧೀನಕ್ಕೊಳಗಾಗುವಂತೆ ಮಾಡಿತು.

ಪ್ರಾಥಮಿಕ ಭೂಮಾಲೀಕತ್ವದ ಬೆಳವಣಿಗೆಯು ಎಣ್ಣೆ ಉತ್ಪಾದನೆಯ ಕಸುಬಿನ ಮೇಲೂ

ಪರಿಣಾಮವನ್ನುಂಟುಮಾಡಿತು. ಎಣ್ಣೆ ಉತ್ಪಾದನೆಯು ಕರ್ನಾಟಕದಲ್ಲಿ ಸಾಮಾನ್ಯವಾದ ವೃತ್ತಿಯಾಗಿದ್ದರೂ, ೧೦-೧೩ರ ಶತಮಾನದಲ್ಲಿ ಇದರ ಪ್ರಾಮುಖ್ಯತೆ ಹೆಚ್ಚಿತು. ಈ ಕಾಲದ ದಾಖಲೆಗಳು ಎಣ್ಣೆಯನ್ನು ಔಡಲು ಬೀಜಗಳಿಂದ, ತೆಂಗಿನಕಾಯಿ ಮತ್ತು ಎಳ್ಳಿನಿಂದ ತಯಾರಿಸುತ್ತಿದ್ದುದನ್ನು ತಿಳಿಸುತ್ತವೆ.[೨೬] ಇದು ವಸ್ತುವಿನ ವಿವಿಧ ಉತ್ಪನ್ನಗಳಿಗೋಸ್ಕರ ಕಸುಬು-ಆಧಾರಿತ ಉಪಜಾತಿಗಳನ್ನು ಸೃಷ್ಟಿಸಿತು.[೨೭] ಎಣ್ಣೆ ಮತ್ತು ಅದರ ಉಪಉತ್ಪನ್ನಗಳು ವ್ಯಕ್ತಿಯನ್ನು ಶ್ರೀಮಂತಗೊಳಿಸಿದವು. ಈ ವೃತ್ತಿಯೂ ಬಹಳಷ್ಟು ಲಾಭವನ್ನು ನೀಡುತ್ತಿದ್ದುದು ಕಂಡು ಬರುತ್ತದೆ.[೨೮]

ಆದರೆ ೧೧ನೇ ಶತಮಾನದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಎಣ್ಣೆ ಕಾರ್ಖಾನೆಗಳನ್ನು ಬೇಕಾಬಿಟ್ಟಿಯಾಗಿ ಧಾರ್ಮಿಕ ಸಂಸ್ಥೆಗಳಿಗೆ ವರ್ಗಾಯಿಸಿದ್ದು, ಜಮೀನಿನ ಹಾಗೂ ಮುಖ್ಯ ವಸ್ತುಗಳ ಮೇಲೆ ಮಧ್ಯವರ್ತಿಗಳು ಹಿಡಿತ ಸಾಧಿಸಿದ್ದು ಈ ಉದ್ದಿಮೆಯು ಕುಂಠಿತಗೊಳ್ಳಲು ಕಾರಣವಾಯಿತು.[೨೯] ಮೊದಲಿನ ದಾಖಲೆಗಳು ಇಂತಿಷ್ಟು ಪ್ರಮಾಣದಲ್ಲಿ ದೇವಸ್ಥಾನಗಳಿಗೆ ಎಣ್ಣೆಯನ್ನು ದಾನವಾಗಿ ಕೊಡುವುದರ ಬಗ್ಗೆ ತಿಳಿಸುತ್ತವೆ. ಆದರೆ ಈ ದಾಖಲೆಗಳು ಇಡೀ ಎಣ್ಣೆ ಕಾರ್ಖಾನೆಗಳನ್ನು ಧಾರ್ಮಿಕ ಸಂಸ್ಥೆಗಳಿಗೆ ವರ್ಗಾಯಿಸಿದುದರ ಬಗ್ಗೆ ಮಾಹಿತಿಗಳನ್ನು ಒದಗಿಸುವುದಿಲ್ಲ. ಆದಾಗ್ಯೂ ಇವು ದೇವಸ್ಥಾನಗಳಿಗೆ ಮತ್ತು ರಾಜ್ಯಕ್ಕೆ ಹೆಚ್ಚಿನ ತೆರಿಗೆಯನ್ನು ಕೊಡಬೇಕಾಗಿತ್ತು. ಧಾರವಾಡ, ಬಿಜಾಪುರ ಮತ್ತು ಬೆಳಗಾಂ ಜಿಲ್ಲೆಗಳಲ್ಲಿ ಶೇ. ೧೨ ರಿಂದ ಶೇ. ೨೨ರಷ್ಟು ಜನಸಂಖ್ಯೆಯಿರುವ ಎಣ್ಣೆ ಉತ್ಪಾದಕರು, ತಮ್ಮ ವೃತ್ತಿಗೆ ರಕ್ಷಣೆಯನ್ನು ಒದಗಿಸಿಕೊಳ್ಳುವ ಉದ್ದೇಶದಿಂದ ವೀರಶೈವ ಚಳುವಳಿಯನ್ನು ಸೇರಿದ್ದರೆಂದು ತೋರುತ್ತದೆ. ದೇವಸ್ಥಾನದ ಸಂಪ್ರದಾಯಬದ್ಧ ವಿಧಿಗಳನ್ನು ವೀರಶೈವದವರು ನಿರಾಕರಿಸುವುದರಿಂದ, ಈ ಕಸುಬುದಾರರು ಧಾರ್ಮಿಕ ಮಧ್ಯವರ್ತಿಗಳ ಹಿಡಿತದಿಂದ ತಪ್ಪಿಸಿಕೊಳ್ಳುವಂತಾಯಿತು. ಇದಲ್ಲದೆ, ತೆರಿಗೆಯ ಭಾರವನ್ನು ಸಹ ಕಡಿಮೆ ಮಾಡಿತು. ಇದರ ಫಲವಾಗಿ ಈಗ ರಾಜ್ಯಕ್ಕೆ ಮಾತ್ರ ತೆರಿಗೆ ಕೊಡಬೇಕಾಗಿತ್ತು.

೧೦-೧೩ರ ಶತಮಾನಗಳಲ್ಲಿ ವಾಣಿಜ್ಯ ಮತ್ತು ಹಣಕಾಸಿನ ಆರ್ಥಿಕ ಪರಿಸ್ಥಿತಿಯ ಏಳಿಗೆಯಿಂದ ಅನೇಕ ಉತ್ಪಾದಕರಿಗೆ, ಕಸಬುದಾರರಿಗೆ ಮತ್ತು ವರ್ತಕರಿಗೆ ಬಹಳ ಲಾಭವಾಗಿತ್ತು. ಆದರೆ ಪರಂಪರಾನುಗತ ಮಧ್ಯವರ್ತಿಗಳನ್ನು ಬೆಳಸಿದ್ದು ಇವರ ಬೆಳವಣಿಗೆಗೆ ಮಾರಕವೆನಿಸಿತು. ಇದಕ್ಕೆ ಮುಖ್ಯ ಮೇಲೆ ವಿವರಿಸಿದ ಆರ್ಥಿಕ ಹಾಗೂ ಸಾಮಾಜಿಕ ಬದಲಾವಣೆಗಳು ಭೂಮಾಲೀಕರು ರೈತರನ್ನು ಮತ್ತು ಕಾರ್ಮಿಕರನ್ನು ಶೋಷಿಸುತ್ತಿದ್ದಲ್ಲದೆ, ವ್ಯವಸಾಯದ ಬೆಳೆಗಳನ್ನು ಮತ್ತು ಉತ್ಪನ್ನಗಳನ್ನು ತಮ್ಮ ಇಚ್ಛಾನುಸಾರಿಯಾಗಿ ಅಧೀನಕ್ಕೊಳಪಡಿಸಿಕೊಳ್ಳುತ್ತಿದ್ದರು; ಇಲ್ಲವೆ ಬೇರೆ ಉದ್ದೇಶಗಳಿಗಾಗಿ ಬಳಸುತ್ತಿದ್ದರು. ಇದರಿಂದ ವರ್ತಕರಿಗೆ ಬಂಡವಾಳ ಹೂಡಲು ತೊಂದರೆಯಾಗುತ್ತಿತ್ತು. ವರ್ತಕರ ಬೆಂಬಲದಿಂದ ಅಸ್ತಿತ್ವದಲ್ಲಿದ್ದ ಬೌದ್ಧ ಮಠಗಳು ವಾಣಿಜ್ಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದಲ್ಲದೆ, ಬಡ್ಡಿಯ ಮೇಲೆ ಸಾಲವನ್ನೂ ನೀಡುತ್ತಿದ್ದವು.[೩೦] ಮಧ್ಯಕಾಲೀನ ಕರ್ನಾಟಕದ ದೇವಾಲಯಗಳಲ್ಲಿ ಈ ರೀತಿಯ

೭. ಮತ್ತಷ್ಟು ವಿವರಗಳಿಗೆ. ನೋಡಿ ಜೆ.ಎಫ್. ಫ್ಲೀಟ್, "Ablur Inscriptions". ಎಪಿಗ್ರಾಫಿಯಾ ಇಂಡಿಯಾ (೧೮೯೯) V: ಆರ್.ಜಿ. ಭಂಡಾರ್‌ಕರ್ vaisnavism. Saivism and Minor Religion Systems/Strassbura. 1913): ನಿಕೋಲ್ ಮಾಕ್ ನಿಕೋಲ್, Indian Theism (London. ೧೯೧೫): ಕೆ.ಎ.ಎನ್. ಶಾಸ್ತ್ರಿ. A History of south India (O.U.P.) ೧೯೫೮). ಎರಡನೇ ಸಂಪುಟ pp೪೩೫-೬: ಎಸ್.ಸಿ. ನಂದಿಮಠ, A Handbook of virasaivism (Dharwad. ೧೯೪೨): Max Weber. The Religion of India. (ಇಲ್ಲಿನಾಯ್ಸ್, ೧೯೫೮).

೮. ಇಂಡಿಯನ್ ಆಂಟಿಕ್ವೆರಿ, x.೮೫

೯. ಎಪಿಗ್ರಾಪಿಯಾ ಇಂಡಿಯಾ XIII. ೧೫೧

೧೦. ಎಪಿಗ್ರಾಫಿಯಾ ಇಂಡಿಯಾ VII SK. ೧೧೮ ೧೧೦೦ ರಿಂದ ೧೩೦೦ ರವರೆಗಿನ ಶಾಸನಗಳಲ್ಲಿ ಈ ಸಂಘದ ಬಗ್ಗೆ ಮಾಹಿತಿಗಳು ದೊರಕುತ್ತವೆ.

೧೧. ಇಂಡಿಯನ್ ಆಂಟಿಕ್ವೆರಿ, ನಂ. ೧೧

೧೨. The Book of Ser Marco Polo (London ೧೮೭೫). ೧೮೬

೧೩. ಅದೇ, P ೩೭೯

೧೪. ಅದೇ, p ೩೬೩ ಮತ್ತು note -P ೩೭೦

೧೫. ಅದೇ P ೩೬೩: ನಿಕಾಲೋ ಕಾಂಟಿ, pp -೩೯, ಮತ್ತು ವಾಸ್ಕೋಡಿಗಾಮ, The Three Voyages. p-೧೮೪. ಉಲ್ಲೇಖ: Economic Conditions of Southern India. ಅ. ಅಪ್ಪಾದುರೈ ೧೧ (Madras ೧೯೩೬) ೫೨೭-೮

೧೬. ಎಂ.ಎಸ್. ಅಡ್ಲರ್ The Itinerary of Benjamin of Tudela. P-೬೩-೫. ಉಲ್ಲೇಖ: ಕೆ.ಎ.ಎಸ್. ಶಾಸ್ತ್ರಿಯ, Foreign Notices of South India (Madras University. 1939) p-134-5

೧೭. ಎಚ್ ಎಂ. ಎಲ್ಲಿಯಟ್, History of India as Told by Its Own Historians i(೧೯೬೭). ೯೦

೧೮. ವರ್ಥಿಮ, travels ೧೯೨. ಬಾರ್ಬೋಸ, An Account i, ೧೨೮. ಉಲ್ಲೇಖ: ಅಪ್ಪಾದುರೈ. Op-Cit. ೫೩೧

೧೯. ಬಾರ್ಬೋಸ An Account. ೧೨೮. ಉಲ್ಲೇಖ: ಅಪ್ಪಾದುರೈ op.cit. -೫೩೧

೨೦. ಫ್ರಿಯರ್ ಜೋರ್ಡನಸ್, Worders of East, tr. ಸಿ.ಎಚ್. ಯೂಲೆ, p-೧೫-೬

೨೧. ಸಿ.ಎಚ್. ಯೂಲೆ, ಸಂ. The Book of Ser Marco Polo ii ೩೬೩

೨೨. ಅದೇ -೩೮೫; ಬಾರ್ಬೋಸ, An Account. i. ೫೩-೬, ಉಲ್ಲೇಖ: ಅಪ್ಪಾದುರೈ, op.cit. -೫೩೭

೨೩. ೧೦-೧೩ರ ಶತಮಾನದ ಕಾಲದಲ್ಲಿ ಪರಂಪರಾನುಗತವಾಗಿ ಬಂದ ಸಾಮಂತ: ಮಹಾ ಸಾಮಂತ, ದಂಡನಾಯಕ, ಮಹಾಪ್ರಧಾನ ಮತ್ತು ಮಹಾಮಂಡಕೇಶ್ವರ ಕುಟುಂಬಗಳ ಬಗ್ಗೆ, ಶಾಸನಗಳು ಹೆಚ್ಚು ಹೆಚ್ಚಾಗಿ ಬರೆಯಲ್ಪಟ್ಟಿವು.

೨೪. ಗ್ರಾಮ ಕಚೇರಿಗಳಲ್ಲಿ ಪರಂಪರಾನುಗತವಾಗಿ ಬದಲಾವಣೆ ಹೊಂದಿದುರಲ್ಲಿ ಗಾವುಡ, ಪೆರ್ಗಡೆ, ಮತ್ತು ಕರಣಗಳು ಸೇರಿವೆ. ನೋಡಿರಿ ಆರ್.ಎಸ್.ನಂದಿ "Scocial & Religion Deve-

ನಡಸುವುದನ್ನು ನಿಲ್ಲಿಸಿದರು. ಯಾಕೆಂದರೆ ಇವು ಶ್ರೀಮಂತರಲ್ಲಿ ಅಷ್ಟೇನು ಜನಪ್ರಿಯವಾಗಿರಲಿಲ್ಲ. ಈ ಕಾಲದಲ್ಲಿ ಗೃಹಕೃತ್ಯದ ಸಂಪ್ರದಾಯಗಳು 'ಗೃಹಸೂತ್ರ'ದಲ್ಲಿರುವಂತೆ. ಜಾರಿಗೆ ಬಂದವು. ಈಗಿನ ಗೃಹ ಸಂಸ್ಕಾರಗಳಲ್ಲಿ ಕಾಣಬರುವ ದೇವ-ದೇವತೆಗಳು ಈ ಸಂಪ್ರದಾಯಗಳಲ್ಲಿ ಕಂಡು ಬರುತ್ತಾರೆ.

೩೭. ಕೆಲವರ ಪ್ರಕಾರ 'ಕುಮಾರಿರಾನು'-'ಪಂಚಯಾತನ'ದ ಉಗಮಕ್ಕೆ ಕಾರಣನೆಂದು ಹೇಳಿದ್ದಾರೆ. ನೋಡಿರಿ ಫರ್ಕ್ಯುವರ್ op. cit -೧೭೯

೩೮. 'Tirumandiram of Tirumedur' ಎಂಬ ಕೃತಿಯಲ್ಲಿ ಬರುವ ೧೮೬೧ರ ಭಾಗಗಳನ್ನು ನೋಡಿರಿ, ಸಿ.ವಿ.ಎನ್. ಅಯ್ಯರ್ Origin and Early History or Saivism in South India (Madras, ೧೯೩೬) ಪು. ೨೮೦-೧

೩೯. ನೋಡಿರಿ ಆರ್.ಎನ್. ನಂದಿ, "Origin and Nature of Saivite Monastism: The Case of Kalamukhas", Indian Society, Historical Probrings (Delhi, 1974) p-೧೯೦-೨೦೧.

೪೦. ಉಸಾನ ಪ್ರಕಾರ ಕೆಳ ಜಾತಿಯವರ ಯಜ್ಞ-ಯಾಗಾದಿಗಳನ್ನು ನಡೆಸುವವರು, ವೇದಗಳನ್ನು ಕಲಿಸುವವರು, ಸ್ಮೃತಿಗಳನ್ನು ಮಾರುವವರು, ಹಾಗೂ ಅಪರಿಚಿತರಿಗೆ ವಿದ್ಯೆಯನ್ನು ಹೇಳಿ ಕೊಡುವವರು, ಶ್ರಾದ್ಧ ಸಮಯದಲ್ಲಿ ನಡೆಸುವ ಯಾಗಗಳಲ್ಲಿ ಭಾಗವಹಿಸಲು ಅನರ್ಹರು, ಉಸಾನ ಸಂಹಿತ, ಅಧ್ಯಾಯ IV, VV ೨೩-೬, ಉಲ್ಲೇಖ: ಅಯ್ಯರ್ op.cit ಪು. ೨೧೪-೫; ನೋಡಿರಿ ಮನುಸ್ಮೃತಿ, ೧೧೩-೧೫೨ ವೃದ್ಧಹರಿತೆ, VIII. ೭-೮೦; ಅಪರಿಚಿತ, ಸ್ಮೃತಿಯ ಮೇಲೆ ಅಪರಾರ್ಕನ ಹೇಳಿಕೆಗಳು, P-೪೫೦ ಮತ್ತು ೯೨೩, ಉಲ್ಲೇಖ: ಕಲಿವರ್ಜ್ಯ, ಪಿ.ವಿ. ಕಾಣೆ, History of Dharmashastra. iii.(Poona ೧೯೪೬) ೯೫೦-೧

೪೧. ಭಿನ್ನಮತೀಯ ದೇವರುಗಳನ್ನು ಪೂಜಿಸುವುದನ್ನು ವೀರಶೈವವು ಮಾನ್ಯ ಮಾಡುವುದಿಲ್ಲ. ಚೆನ್ನಬಸವ ಪುರಾಣ ಅಧ್ಯಾಯ-೫೯,(JBBRAS,೧೮೬೮)ಸಿದ್ಧರಾಮನು ಶೈವ ಅನುಯಾಯಿಯಾಗಿದ್ದ, ಆದರೆ ಆತನು ಯಾವುದಾದರೂ ದೇವಸ್ಥಾನದಲ್ಲಿ ಸೇವೆ ಸಲ್ಲಿಸುತ್ತಿದ್ದನೋ, ಇಲ್ಲವೊ ತಿಳಿದಿಲ್ಲ.

೪೨. ಅಲ್ಲಮಪ್ರಭು ಮತ್ತು ಸಿದ್ಧರಾಮರು, ದೀಕ್ಷೆಯ ಸಮಯದಲ್ಲಿ ಲಿಂಗವನ್ನು ಧರಿಸಲು ಹಿಂಜರಿದುದನ್ನು ಗಮನಿಸತಕ್ಕುದ್ದು; ಚೆನ್ನಬಸವಪುರಾಣ JBBRAS (೧೮೬೮).ಪು-೧೩೪. ಬಸವನಿಗೆ ಷಟ್‌ಸ್ಥಲದಲ್ಲಿ ದೀಕ್ಷೆಯನ್ನು ಕೊಡುವಾಗ ಇಷ್ಟಲಿಂಗದ ಪೂಜೆಯನ್ನು ವ್ಯಕ್ತಿಗತವಾಗಿ ಮಾಡುವ ಬಗೆಗೆ ಚೆನ್ನಬಸವನು ಆಡುವ ಹೊಗಳಿಕೆಯ ಮಾತುಗಳನ್ನು ಗಮನಿಸಿ, ಜೊತೆಗೆ ಬಸವನು ತಾನು ಇದುವರೆಗೆ ವ್ಯರ್ಥವಾಗಿ ಬಹಿರಂಗ ಪೂಜೆ ಮಾಡುತ್ತಿದ್ದುದರ ಬಗೆಗೆ ಪಶ್ಚಾತ್ತಾಪ ಪಡುವುದನ್ನು ಗಮನಿಸಬಹುದು, ಅದೇ ಪು-೧೨೫.

೪೩. ಎಸ್.ಎನ್. ದಾಸಗುಪ್ತ, History of Indian Philosophy. V (Cambridge, ೧೯೫೫), ೫೫

೪೪. ಅದೇ, ಪು-೪೫

೪೫. ಸಿದ್ಧರಾಮನಿಗೆ ದೀಕ್ಷೆ ಕೊಡುವಾಗ ಬೇರೆ ದೇವರುಗಳ ಪೂಜೆಯ ವಿರುದ್ಧ ಅಥವಾ ಬೇರೆ ದೇವರುಗಳ ಪೂಜೆ ಮಾಡುವವರ ಸಹವಾಸದ ವಿರುದ್ಧ ಚೆನ್ನಬಸವನು ಎಚ್ಚರಿಕೆಯ ಮಾತುಗಳನ್ನಾಡುತ್ತಾನೆ. 'ಚೆನ್ನಬಸವ ಪುರಾಣ' ಅಧ್ಯಾಯ-೫೯. JBBRAS (೧೮೬೮).

೬೨. ಎಪಿಗ್ರಾಫಿಯ ಕರ್ನಾಟಕ, ೫, ಚೆನ್ನರಾಯಪಟ್ಟಣ. ಇದು ದಂಡನಾಯಕನು ೧೨೨೩ ರಲ್ಲಿ ಹಳೆಯ ಉಳುಮೆಗಾರರನ್ನು ಹೊರಗಟ್ಟುತ್ತಿದುದರ ಬಗ್ಗೆ ತಿಳಿಸುತ್ತದೆ: ಎ.ಕ. ೧೧, ಜಗಳೂರು ೩೦, ಇದು ರಾಜ್ಯಾಧಿಕಾರವು ೧೨೭೮ರಲ್ಲಿ ಭೂಮಿಯನ್ನು ದೇವಸ್ಥಾನಕ್ಕೆ ಕಾಣಿಕೆಯನ್ನಾಗಿ ಕೊಡುವ ಮೊದಲು ಅಲ್ಲಿನ ಉಳುಮೆಗಾರರನ್ನು ಹೊರಗಟ್ಟಿದುದರ ಬಗ್ಗೆ ತಿಳಿಸುತ್ತದೆ; ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ (೧೯೪೦): ನಂ.೨೧, ಇದು ದೇವಸ್ಥಾನಕ್ಕೆ ಕೊಟ್ಟ, ಕೆಲವು ಜಮೀನಿನ ಉಳುಮೆಗಾರರನ್ನು ಬ್ರಾಹ್ಮಣರು ಖಾಲೀ ಮಾಡಿಸುತ್ತಿದುದರ ಬಗ್ಗೆ ಮಾಹಿತಿ ಕೊಡುತ್ತದೆ.

೬೩. ಎ.ಕ. ೫, ಅರಸೀಕೆರೆ, ೧೧೩, A.D.೧೩೧೮

೬೪. ೧೯೭೨ ರಲ್ಲಿ ಹೊಯ್ಸಳ ದೊರೆ ವೀರ ನರಸಿಂಹನು ಸರಿ ಸುಮಾರು ಹನ್ನೆರಡು ಹಳ್ಳಿಗಳನ್ನು ತೆರಿಗೆಯ ಬಾಕಿಗಳೊಂದಿಗೆ ದೇವಸ್ಥಾನವೊಂದಕ್ಕೆ ವರ್ಗಾಯಿಸಿದನು, ಇದರ ಜೊತೆಗೆ ಉಳುಮೆಗಾರರನ್ನು ಒತ್ತಾಯಪೂರ್ವಕವಾಗಿ ಬಳಸಿಕೊಳ್ಳುವ ಹಕ್ಕನ್ನು ದೇವಸ್ಥಾನಕ್ಕೆ ವರ್ಗಾಯಿಸಲಾಯಿತು, ಎ.ಕ.೭, ೪೮; ಎ.ಕ. ೧೦, ಕರ್ನಾಟಕ ಇನ್‌ಸ್ಕ್ರಿಪ್‌ಶನ್ಸ್, ಇದು ಬ್ರಾಹ್ಮಣ ಭೂಮಾಲೀಕನು ಅದೇ ಹಳ್ಳಿಯ ಶೈವ ಬ್ರಾಹ್ಮಣನಿಗೆ ಒತ್ತಾಯಪೂರ್ವಕವಾಗಿ ಕೂಲಿಯಿಲ್ಲದೆ ಉಳುಮೆಗಾರರನ್ನು ದುಡಿಸಿಕೊಳ್ಳುವ ಹಕ್ಕನ್ನು ನೀಡಿದುದರ ಬಗ್ಗೆ ತಿಳಿಸುತ್ತದೆ. ಎ.ಕ.ವ. ಅರಕಲಗೂಡು, ೨೧ ಇದು ಸಂಚಾರಿ ಅಧಿಕಾರಿಗಳಿಗೆ ಮತ್ತು ಸೈನಿಕರಿಗೆ ಒತ್ತಾಯ ಪೂರ್ವಕವಾಗಿ ಕೆಲಸ ಮಾಡಿಸಿಕೊಳ್ಳುವ ಅನುಮತಿ ನೀಡಿದ ಬಗ್ಗೆ ಮಾಹಿತಿ ಒದಗಿಸುತ್ತದೆ.

೬೫. Mysore Archeological Report (೧೯೩೬). No.೧೯, ಪುಟ.೮೪

೬೬. ಎ.ಕ. ೫, ಹಾಸನ ೩೪, ४೨, ೧೨೨

೬೭. ಸಿಸ್ಟರ್ ಲಿಸೇರಿಯಾ, op. cit.

೬೮. ಆರ್.ಎಸ್. ನಂದಿ, ಭೂಪಟ Religious Instituions and Cults in The Deccan (C.A.D.೬೦೦-೧೦೦೦)

೬೯. ಲಿಂಗಾಯತ ಶರಣರ ಪುರಾಣೇತಿಹಾಸದಲ್ಲಿ ಬರುವ ನೇಯ್ಗೆಯವರನ್ನು ಮತ್ತು ವಚನಕಾರರ ಪಟ್ಟಿಗಳನ್ನು ಹೋಲಿಸಿ ನೋಡಿ.

೭೦. ೧೯೦೮ ರ Imperial gazetteer of India. ೭. ೮. ಮತ್ತು ೧೧ರ ಪ್ರಕಾರ ಬಿಜಾಪುರ ಜಿಲ್ಲೆಯಲ್ಲಿ ೮೬೦ ಚದರ ಮೈಲಿ ಜಮೀನಿನಲ್ಲಿ ಮೊದಲಿಗೆ ಬೆಳೆದ ಬೆಳೆ ಹತ್ತಿ; ಧಾರವಾಡ ಮತ್ತು ಬೆಳಗಾಂ ಜಿಲ್ಲೆಗಳು ಎರಡನೆ ಸ್ಥಾನದಲ್ಲಿ ನಿಲ್ಲುತ್ತವೆ.

೭೧. ಎಫಿಗ್ರಾಫಿಯಾ ಇಂಡಿಯಾ, ೧೮, ನಂ.೨೨E. ೧೯೬. Bombay-Karnataka Inscriptions, i (೪, No.೯೭); ಎ.ಇ. ೧೩, ನಂ. ೧೪

೭೨. ಕೈ ಮಗ್ಗ ಕಾರ್ಮಿಕರ ಮೇಲೆ ತೆರಿಗೆ ಹೇರಿದುದರ ಬಗ್ಗೆ ನೋಡಿರಿ, ಎ.ಕ. ೫, ಹಾಸನ ೧೧೯, A.D. ೧೧೭೩; ಬಣ್ಣ ಮಾಡುವುದರಿಂದ ವಸೂಲಿ ಮಾಡಿದ ತೆರಿಗೆಯ ವಿವರಗಳ ಬಗ್ಗೆ ನೋಡಿರಿ, ಎ.ಕ. ೯, ಚೆನ್ನರಾಯಪಟ್ಟಣ, ೬೬; ಎ.ಕ. ೫, ಹಾಸನ, ೧೧೯, ಇತರ ಉಲ್ಲೇಖಗಳಿಗೆ ನೋಡಿರಿ ಎ.ಇ. ೧೯. ನಂ. ४; Annual Report on South Indian Epigraphy ನಂ ೭೦, ೧೯೪೬; ಎ.ಕ. ೭, ಶಿಕಾರಿಪುರ ೧೪೫

೭೩. ಎ.ಕ. ೧೦, ಬೌರಿಂಗ್ ಪೇಟೆ, ೭೨, ಕ್ರಿ.ಶ. ೧೪೩೦ ಇದು ಹೊಲೆಯರಿಗೆ, ಬಡಿಗರಿಗೆ, ಕಮ್ಮಾರರಿಗೆ, ಮತ್ತು ಅಕ್ಕಸಾಲಿಗರಿಗೆ ಸಿಕ್ಕ ಸುಂಕ ರಿಯಾಯಿತಿಗಳ ಬಗ್ಗೆ ತಿಳಿಸುತ್ತದೆ;

ಹೊಳಹು

## ‘ಉಲಿಪಿ’ ಎಂದರೇನು?

● ಎಸ್.ಎಸ್. ಅಂಗಡಿ

‘ಉಲಿಪಿ’ ಎಂದರೆ ಜಾತ್ರೆ, ಮದುವೆ ಮುಂತಾದ ಸಾಂಸ್ಕೃತಿಕ ಸಂದರ್ಭಗಳಲ್ಲಿ ಆಯಗಾರರಿಗೆ ಆಹಾರ ಸಾಮಗ್ರಿಗಳನ್ನು ಕಾಣಿಕೆಯಾಗಿ ಕೊಡುವುದರ ಮೂಲಕ ಮರ್ಯಾದೆ ಸಲ್ಲಿಸುವುದು. ಉಲಿಪಿಯ ಹೆಸರು ಹಲವು ಶಾಸನ ಹಾಗೂ ಪ್ರಾಚೀನ ಕೃತಿಗಳಲ್ಲಿ ದೊರಕುತ್ತದೆ.

(i) ಹೆಯ ಹುಲ್ಲು ಉಲುಪೆ ಉಡುಗೋಜೆ ಬಿಟ್ಟ ಕೊಟ್ಟಣ ಹಾಲುಕೊಡು ಬಿಡಾರ ಅಂಗಜಾವಿಗೆ ಮಾದಾಜೆಕೆ ಅಧಿಕಾರಿ (ii) ಕುಮಾರರು ದಿಕ್ಕು ದಿಕ್ಕಿನಿಂದ ಸಾರವಸ್ತುಗಳು ಲುಪೆಯ ಕಳುಹಿದರವ ನಾರ್ಯೆವುತಿರ್ದಳಾ ಜನನಿ (iii) ಊರುರ್ಗಳಿಂ ತರ್ಪುಲುಪೆಗಳು ಪುಣ್ಯಾಯ್ಕರ್ಬೆಳ ನೀಗರ್ಳ ಕಸವೆಂದು ಮಾಣಿಸಿ (iv) ಊರುಗಳು ತಂದೊಪ್ಪಿದ ನವಸಾರ ಫಲದುಲುಪೆಯೊಳು ಪಥ ಸಂಚಾರವೇ ನಂದನ ವಿಹಾರವದೆನಿಸಿತಾತಂಗೆ (v) ಅವರ ಊಟ ಉಡಿಗೆಯ ಸಲುವಾಗಿ ದಿನಾಲು ಉತ್ತಮ ಸಾಮಾನುಗಳ ಉಲುಪಿಯ ಹೊತ್ತು ಹೊತ್ತಿಗೆ ಸಿಗುವಂತೆ ವ್ಯವಸಾಯ ಮಾಡಿದರು.

ಕಾವ್ಯ, ಶಾಸನಗಳಲ್ಲಿ ‘ಉಲಪಿ’ ಎನ್ನುವ ಪದ ಮೂರು ಅರ್ಥದಲ್ಲಿ ಬಳಕೆಯಾಗಿದೆ.

i) ಕೆರೆ, ದೇವಾಲಯ ಮುಂತಾದ ಸಾರ್ವಜನಿಕರಿಗೆ ಉಪಯುಕ್ತವಾದ ಕೆಲಸಗಳಲ್ಲಿ ತೊಡಗಿದ ಕುಶಲಕರ್ಮಿಗಳಿಗೆ ಹಣದ ಬದಲಾಗಿ ಅವರಿಗೆ ಜೀವನಾವಶ್ಯಕ ಸಾಮಗ್ರಿಗಳನ್ನು ಉಡುಗೊರೆಯಾಗಿ ಕೊಡುವುದು.

ii) ಊರಿಂದೂರಿಗೆ ಹೋಗುವಾಗ ಅಥವಾ ಹೆಣ್ಣು ಗಂಡನ ಮನೆಗೆ ಹೋಗುವಾಗ, ಅಡಿಗೆ ಮಾಡಲಿಕ್ಕೆ ಬೇಕಾಗುವ ಗೋದಿ, ಹಿಟ್ಟು, ಬೆಲ್ಲ, ಬ್ಯಾಳಿ, ಅಕ್ಕಿಗಳಿಗೆ ‘ಹಿಟ್ಟಕ್ಕಿ’ ಎಂದು ಕರೆಯುವರು. ಇದಕ್ಕೂ ‘ಉಲಿಪಿ’ ಎಂಬ ಪದ ಪ್ರಯೋಗವಾಗಿದೆ. (ಗಳನಾಥರ ‘ಛತ್ರಪತಿ’ ಕಾದಂಬರಿ).

iii) ಕೃಷಿ ಸಮುದಾಯದಲ್ಲಿ ಕೆಲಸ ಮಾಡುವ (ಸಾಮಾಜಿಕವಾಗಿ ಕೆಳವರ್ಗಕ್ಕೆ ಸೇರಿದ) ಕೆಲಸದಾಳುಗಳಿಗೆ ಹಣದ ಬದಲಾಗಿ ಆಹಾರ ಸಾಮಗ್ರಿಗಳನ್ನು ಕೊಡುವ ಪದ್ಧತಿ ಇದೆ.

ಆದರೆ ಇತ್ತೀಚೆಗೆ ‘ಉಲಿಪಿ’ ಎಂಬ ಪದ ಅರ್ಥಸಂಕೋಚವನ್ನು ಪಡೆದಿದ್ದು, ಮದುವೆಯ ಸಂದರ್ಭದಲ್ಲಿ ಮಾತ್ರ ಬಳಕೆಯಾಗುತ್ತಿದೆ.

ಒಕ್ಕಲು ಕುಟುಂಬಗಳಲ್ಲಿ ಮದುವೆ ಸಂದರ್ಭದಲ್ಲಿ ಹಾಗೂ ವರ್ಷದುದ್ದಕ್ಕೂ ನೆರವಾದ ಬಡಿಗ, ಕುಂಬಾರ, ಹೂಗಾರ, ಚಮ್ಮಾರ ಇಂತಹ ಆಯ ಕುಟುಂಬಗಳನ್ನು ಮನೆಗೆ ಕರೆದು ಉಲಿಪಿ ಕೊಡುತ್ತಾರೆ. ಉದಾ: ಹೂಗಾರರ ಮನೆಯಿಂದ ತರಲಾಗುವ ಬಾಸಿಂಗ, ದಂಡೆ ಪವಿತ್ರವಾದುದು. ಮದುವೆಗೆ ಪೂರ್ವದಲ್ಲಿ ಮನೆಯವರು ಹೇಳಿದ ಪ್ರಕಾರ ಹೂಗಾರರು ಬಾಸಿಂಗ, ದಂಡೆಗಳನ್ನು ಸಿದ್ಧಗೊಳಿಸುವರು. ಹಾಗೆಯೇ ಮದುವೆಯ ದಿನದಂದು ಪೂಜೆಗಾಗಿ ಕುಂಬಾರರ ಮನೆಯಿಂದ ಹೊಸ ಮಡಕೆ(ಐರಾಣಿ)ಗಳನ್ನು ಕೊರವರ ಮೂಲಕ ಸನಾದಿ ಬಾರಿಸುತ್ತ ಬಂದು, ಪೂಜೆ ಮಾಡಿ 'ಉಲಿಪಿ' ಯಿಟ್ಟು ಅವನ್ನು ಒಯ್ಯುವರು. ಆಗ ಹೂಗಾರರು ಹಾಗೂ ಕುಂಬಾರರು ಮದುಮಕ್ಕಳಿಗೆ ಬಗಟಿನ ರೂಪದ ಹರಕೆ ಸಲ್ಲಿಸುವರು. (ಹೆರಿಗೆಯಾದಾಗ ಸೂಲಗಿತ್ತಿಯರಿಗೂ ಉಲಿಪಿ ಕೊಡುವುದುಂಟು.) ಉಲಿಪಿಯಲ್ಲಿ ಬಿಟಿಕ್ಕಿಯ ಜೊತೆಗೆ ಎಲೆ, ಅಡಿಕೆ, ಅರಿಶಿನ, ಕೊಬ್ರಿ, ದಕ್ಷಿಣೆ ಇಟ್ಟಿರುತ್ತಾರೆ. ಆದರೆ ಊಟಕ್ಕೆ ಅವರನ್ನು ಬರಹೇಳುವುದಿಲ್ಲ. ಅದಕ್ಕೆ ಬದಲಾಗಿ ಉಲಿಪಿ ಕೊಡುವರು. ಆಯ ಹಾಗೂ ಒಕ್ಕಲು ಕುಟುಂಬಗಳ ನಡುವಿರುವ ಸೌಹಾರ್ದತೆಯ ಸಂಕೇತವಾಗಿ ಉಲಿಪಿ ಕೊಡುವ ಸಂಪ್ರದಾಯವಿದೆ. ಇಂದಿಗೂ ಕರ್ನಾಟಕದ ಉತ್ತರ ಭಾಗದಲ್ಲಿ ಈ ಸಂಪ್ರದಾಯ ಜೀವಂತವಾಗಿದೆ. ಊರ ದೇವತೆಗೆ ವರ್ಷವಿಡೀ ಬೇರೆ ಬೇರೆ ಸೇವೆ ಸಲ್ಲಿಸಿದ ಆಯಗಾರರಿಗೆ ದೈವದವರು ಕಾಳು, ಬಟ್ಟೆ, ಹಣ ಕೊಡುವರು. ಇದಕ್ಕೆ ಬಾಬು(ಚಾಜು) ಎನ್ನುವರು.

'ಉಲಿಪಿ' ಶಬ್ದದ ಅರ್ಥದ ಬಗ್ಗೆ ಇತರ ದ್ರಾವಿಡ ಭಾಷೆಗಳ ಜ್ಞಾತಿ ಪದಗಳೂ ಸಹಾಯ ಮಾಡುತ್ತವೆ. ತಮಿಳಿನಲ್ಲಿ 'ಉಲುಪ್ಪೈ' ಎಂದರೆ ಕಾಣಿಕೆ. ಮಲಯಾಳಂನ 'ಉಲುಪ', ತೆಲುಗಿನ 'ಉಲುಪ', ತುಳುವಿನ 'ಒಲಿಪೆ' ಶಬ್ದಗಳಿಗೂ ಇದೇ ಅರ್ಥವಿದೆ. ಉಲಿಪಿಯು ತಮಿಳಿನ 'ಉಲುಪ್ಪೈ' ಪದದ ಜ್ಞಾತಿ ಪದವೆಂಬುದು ಸಿದ್ಧವಾದರೆ, ಅದರ ನಿಷ್ಪತ್ತಿಯ ಮಾರ್ಗದಲ್ಲಿ ಒಂದು ದೊಡ್ಡ ಹೆಜ್ಜೆಯನ್ನು ಕ್ರಮಿಸಿದಂತೆ ಆಗುತ್ತದೆ.

●

## 'ಕೊಡವ ಸಾಹಿತ್ಯ': ಒಂದು ಪ್ರತಿಕ್ರಿಯೆ

● ಬಾಲಸುಬ್ರಹ್ಮಣ್ಯ ಕಂಜರ್ಪಣೆ

'ಕೊಡವ ಸಾಹಿತ್ಯದ ಪ್ರಾಚೀನತೆ' (ಕನ್ನಡ ಅಧ್ಯಯನ [illegible] ಸಂಚಿಕೆ, ಪುಟ [illegible]) ಲೇಖನದಲ್ಲಿ ಲೇಖಕರು ತೀರಾ ಭಾವುಕತನವನ್ನು ಪ್ರದರ್ಶಿಸಿದ್ದಾರೆಂದು ಅನ್ನಿಸುತ್ತದೆ. ಒಂದು ಸಾಹಿತ್ಯದ ಪ್ರಾಚೀನತೆ ಇಷ್ಟು ಸರಳವಾಗಿ ನಿರ್ಧಾರವಾಗುವುದಿಲ್ಲ.

ಕೊಡವ ಸಾಹಿತ್ಯ ಇನ್ನೂ ಶೈಶವದಲ್ಲೇ ಇದೆ. ಅದರ ಜನಪದ ಸಾಹಿತ್ಯ ಕೂಡಾ ಮೌಲ್ಯ ಹಾಗೂ ಸಂಖ್ಯೆಯಲ್ಲಿ ಸೀಮಿತವಾಗಿದೆಯೆಂಬುದನ್ನು ಕೊಡವ ಸಾಹಿತ್ಯದ [illegible]

ಬಲ್ಲರು. ಇದನ್ನೊಂದು ಕೊರತೆಯೆಂದು ಕೊಡವ ಸಾಹಿತ್ಯಾಭಿಮಾನಿಗಳು ತಿಳಿಯಬೇಕಾದ್ದಿಲ್ಲ. ಇದು ವಿಕಾಸದ ಮೊದಲ ಹಂತ.

ಕೊಡವ ಭಾಷೆಗೆ ಕನ್ನಡ ಲಿಪಿ ಸುಮಾರು ೧೬೩೩ಕ್ಕಿಂತ ಹಿಂದಿನ ಸಾಹಿತ್ಯೇತಿಹಾಸ ಕೊಡಗಿಗೆ ಲಭ್ಯವಿಲ್ಲ. ಚರಿತ್ರೆಯನ್ನು ಸೃಜನಶೀಲ ಸಾಹಿತ್ಯವೆಂದು ನಂಬುವುದಾದರೆ (ಗಂಗರ ಕಾಲದ ಶಾಸನಗಳಲ್ಲಿ ಕೊಡಗು ಉಲ್ಲೇಖಗೊಂಡಿದೆಯೆಂಬ ವಾದದ ಮೂಲಕ) ಕೊಡವ ಸಾಹಿತ್ಯ ಎಷ್ಟು ಪ್ರಾಚೀನವೋ ಗೊತ್ತಿಲ್ಲವೆಂದು ಸುಮ್ಮನಾಗಬಹುದು. ಕನ್ನಡ, ಮಲೆಯಾಳ, ತಮಿಳು ಬೆರೆತ ಮೂಲನಿವಾಸಿಗಳು ಆಡುತ್ತಿರಬಹುದಾದ, ಕೊಡವ ಭಾಷೆಗೆ ಪ್ರಾಕೃತದಂತಹ ಪರಂಪರೆಯಿರುವುದು ಕಂಡು ಬಂದಿಲ್ಲ. ನಾವು 'ಪ್ರಾಚೀನ' ಎಂಬ ಪದವನ್ನು ಕೊಡವ ಸಾಹಿತ್ಯಕ್ಕೆ ಪ್ರತೀಕವಾಗಿ ಅನ್ವಯಿಸಿ ಹೇಳಬಾರದು. ಜಗತ್ತಿನ, ಹೋಗಲಿ ಭಾರತದ ಅಥವಾ ಕನಿಷ್ಠ ನೆರೆಹೊರೆಯ ಭಾಷೆಗಳಾದ ಕನ್ನಡ, ತುಳು ಇವುಗಳ ಸಾಹಿತ್ಯದೊಂದಿಗೆ ಹೋಲಿಸಿ ತರ್ಕಿಸಬೇಕು. ಭಾಷೆಯ ಪ್ರಾಚೀನತೆ ಬೇರೆ; ಸಾಹಿತ್ಯದ ಪ್ರಾಚೀನತೆ ಬೇರೆ.

೧೬-೧೭ನೇ ಶತಮಾನದಲ್ಲಿ ಕೊಡವ ಸಾಹಿತ್ಯವಿದ್ದುದರ ಕುರಿತು ಉಲ್ಲೇಖವಿಲ್ಲ. (ಲೇಖಕರಿಗೆ ಯಾವುದಾದರೊಂದು ಕೃತಿ ಪ್ರಕಟವಾಗಿರುವುದರ ವಿವರ ಲಭ್ಯವಿದ್ದರೆ ಅದನ್ನು ಉದಾಹರಿಸುವುದು ಉಚಿತವಿತ್ತು.) ಕೊಡಗಿನ ಕುರಿತು ಉಲ್ಲೇಖ ಕೊಡವ ಸಾಹಿತ್ಯದ ಉಲ್ಲೇಖವಲ್ಲ.

'ರಾಜೇಂದ್ರ ನಾಮೆ'. 'ಅಕ್ಬರ್ ನಾಮಾ'ದಂತೆ ಒಂದು ಚಾರಿತ್ರಿಕ ಮಾಹಿತಿ. ಇದನ್ನು ಸಾಹಿತ್ಯವೆಂದು ಒಪ್ಪಿದರೂ, ಇದು ೧೮೦೭ರಂದೀಚೆಗೆ ಬರೆಯಲ್ಪಟ್ಟದ್ದು. ಅಲ್ಲಿರುವ ಚರಿತ್ರೆ ೧೮೦೭ರವರೆಗೂ ಚಾಚಿಕೊಂಡಿದೆ.

'ಪಟ್ಟೋಲೆ ಪಳಮೆ'ಯಾಗಲೀ, ಲೇಖಕರು ಉದ್ಧರಿಸಿದ ಇತರ ಕೃತಿಗಳಾಗಲೀ ೨೦ನೇ ಶತಮಾನದವು. ಪ್ರಾಚೀನ ಸಾಹಿತ್ಯದ ಎಲ್ಲೆಯೊಳಗೆ ಅವನ್ನು ಚರ್ಚಿಸುವುದು ಸಾಧುವಾಗಲಾರದು. ಹರದಾಸ ಅಪ್ಪಚ್ಚ ಕವಿಯನ್ನು ಹೊರತು ಪಡಿಸಿದರೆ ಉಳಿದ ಕೊಡವ ಬರಹಗಾರರು ಭಾಷೆಯ, ಸಾಹಿತ್ಯದ ಅಗತ್ಯ ಅಧ್ಯಯನವನ್ನು ಮಾಡಿದ್ದಾರೆಂದೆನಿಸುವುದಿಲ್ಲ. ಸವೆದು ಹೋದ ದಾರಿಯನ್ನೇ ಹೊಸ ದಾರಿಯೆಂದು ತಿಳಿದು ಬರೆಯುವವರೇ ಇಂದಿಗೂ ಲಭ್ಯವಾಗುತ್ತಾರೆ.

ಐ.ಮಾ. ಮುತ್ತಣ್ಣನವರು ಪಂಡಿತರು. ಹಾಗೆಂದು ಅವರ ರಚನೆಗಳು ಮೌಲಿಕವಾಗಿ ಶ್ರೇಷ್ಠ ಸಾಹಿತ್ಯವೆಂದು ವಸ್ತುನಿಷ್ಠ ವಿಮರ್ಶೆ ತಿಳಿಯುವುದಿಲ್ಲ. ದಾಖಲೆಗಳ ದೃಷ್ಟಿಯಿಂದ, ಕೊಡವ ಸಾಹಿತ್ಯದ ಬೆಳವಣಿಗೆ ಹೇಗಿದೆಯೆಂದು ಪರೀಕ್ಷಿಸುವುದಕ್ಕಾಗಿ ಅವರ ರಚನೆಗಳನ್ನು ಓದಬಹುದು. ಅವರ ಅನುವಾದ ಕೃತಿಗಳಾಗಲೀ ಅರ್ಥಕೋಶಗಳಾಗಲೀ ಪಾಂಡಿತ್ಯದ ಮಜಲುಗಳೇ ವಿನಾ ಸೃಜನಶೀಲತೆಯ ಮುಖಗಳಲ್ಲ. ಕನ್ನಡದಲ್ಲಿ ಇಂಥವರು ಅನೇಕರಿದ್ದಾರೆ.

ಬಿ.ಡಿ. ಗಣಪತಿಯವರೂ ಒಬ್ಬ ವಿದ್ವಾಂಸ; ಜಿಡ್ಡು ಕೃಷ್ಣಮೂರ್ತಿ ಮಾದರಿಯ ತಾತ್ವಿಕ. ಸಾಹಿತಿಯಾಗಿ ಅವರು ಪರಂಪರೆಯನ್ನು ಸೃಷ್ಟಿಸಿದ್ದಾಗಲೀ ಬೆಳೆಸಿದ್ದಾಗಲೀ ಇಲ್ಲ. ತುಂಬ ಓದಿಕೊಂಡಿದ್ದರು. ಅದನ್ನು ಬರೆಹಕ್ಕೆ ಇಳಿಸಲು ವಿಫಲರಾದರು.

ಹೇಳಿಕೊಳ್ಳುವಂತಹ ಸಾಹಿತ್ಯ ಕೊಡವ ಭಾಷೆಯಲ್ಲಿ ಇನ್ನೂ ಸೃಷ್ಟಿಯಾಗಬೇಕು. ಬಿ.ಡಿ. ಗಣಪತಿಯವರನ್ನು 'ತ್ರಿಭಾಷಾ ಸಾಹಿತ್ಯ ಸಾಮ್ರಾಟ' ಎಂದು ಉಲ್ಲೇಖಿಸುವುದು ಬಿ.ಡಿ. ಗಣಪತಿಯವರಿಗೆ ಅವರ ಅಭಿಮಾನವಿಟ್ಟು, ಕೊಡವ-ಕನ್ನಡ-ಇಂಗ್ಲಿಷ್ ಭಾಷೆಗೂ ಅಪಚಾರವಾದೀತೆಂಬ ಭಯ ನನಗೆ.

'ಕೊಡವ ಸಾಹಿತ್ಯ' ಎಂಬ ಪ್ರಯೋಗದಲ್ಲಿ ಬರುವ 'ಕೊಡವ' ಪದ ಹಾಗೂ 'ಕೊಡವ' ಎಂಬ ಜನಾಂಗೀಯ ಉಲ್ಲೇಖ ಇದಕ್ಕೆ ತುಂಬಾ ವ್ಯತ್ಯಾಸ ಮತ್ತು ಭಿನ್ನಾರ್ಥಗಳಿವೆ. ಕೊಡವ ಭಾಷೆಯನ್ನು ಮಾತನಾಡುವ ಸುಮಾರು ೧೮ ಜಾತಿಗಳು ಕೊಡಗಿನಲ್ಲಿವೆಯೆಂದು ರಿಚ್ಟರ್ ತನ್ನ 'ಗೆಜೆಟಿಯರ್ ಆಫ್ ಕೂರ್ಗ್' (೧೮೭೦)ನಲ್ಲಿ ಹೇಳಿದ್ದ. ಆದ್ದರಿಂದ ಕೊಡವರು ತಮ್ಮನ್ನು ಕ್ಷತ್ರಿಯ ಕುಲದವರೆಂದು ಹೇಳಿಕೊಂಡಿದ್ದಕ್ಕೂ ಅವರು ರಾಜರಾಗಿದ್ದುದಕ್ಕೂ, ಕೊಡವರು ದಿವಾನರಾಗಿದ್ದುದಕ್ಕೂ ಕೊಡವ ಭಾಷೆ-ಸಾಹಿತ್ಯಕ್ಕೂ ಏನೇನೂ ಸಂಬಂಧವಿಲ್ಲ. ಕೊಡವ ಭಾಷೆ-ಸಾಹಿತ್ಯ ಕೊಡವ ಮಾತನ್ನಾಡುವ ಎಲ್ಲರ ಸ್ವತ್ತು. ಅದನ್ನು ಯಾವುದೊಂದು ಜನಾಂಗಕ್ಕೆ ಆರೋಪಿಸುವುದು ಸಾಹಿತ್ಯದ ಮೌಲ್ಯ ವಿವೇಚನೆಗೆ ಹೊರತಾದ್ದು.

ಇಷ್ಟಕ್ಕೂ ಕೊಡವರು ತಮ್ಮನ್ನು ಕ್ಷತ್ರಿಯ ಕುಲದವರೆಂದು ಹೇಳಿಕೊಂಡಿದ್ದಕ್ಕೆ ಆಧಾರಗಳಿಲ್ಲ. ಯಾರಾದರೊಬ್ಬರು ಹಾಗೆ ಹೇಳಿದರಾದರೆ ಅದು ವಸ್ತುನಿಷ್ಠ ವಿವೇಚನೆಗೆ ಗ್ರಾಸವಾಗಬಾರದು. ಕೊಡವರು ಸೈನಿಕ ಪರಂಪರೆಗೆ ಸೇರಿದವರಿರಬಹುದೆಂದು ಅವರ ಆಚಾರ-ವಿಚಾರ, ನಡೆ-ನುಡಿ ಸೂಚಿಸುತ್ತದೆ.

ಲಿಪಿರಹಿತವಾದ ಅನೇಕ ಭಾಷೆಗಳು ಜನಪರವಾಗಿದ್ದಾಗಲೂ, ಜನಪದ ಹಾಡುಗಳು ಸೃಷ್ಟಿಯಾದಾಗಲೂ ಶಿಷ್ಟಸಾಹಿತ್ಯ ರಚನೆಯಾಗಬೇಕಾದರೆ ಬೇಕಾಗುವ ಗ್ರಂಥಸ್ಥ ಅಂಶಗಳನ್ನು ಹೊಂದಿರುವುದಿಲ್ಲ. ಕನ್ನಡ ಮತ್ತು ನಂತರ ಇಂಗ್ಲಿಶ್ ಈ ಭಾಷೆಗಳಡಿ ಕೊಡವ ಸಾಹಿತ್ಯ ಅರಳಲಿಲ್ಲ. ಇಂದಿಗೂ ಕೊಡವರ 'ಪಾಲು ಪಾರಿಶತ್ತು', 'ಮಹಜರು'ಗಳು ಕನ್ನಡದಲ್ಲೇ ರಚನೆಗೊಳ್ಳುತ್ತವೆ. ಕೊಡವರು ಪತ್ರಗಳನ್ನು ಬರೆಯುವುದೂ ಕನ್ನಡ ಅಥವಾ ಇಂಗ್ಲಿಶಿನಲ್ಲೇ. ಕೊಡವ ಭಾಷಾ ಪ್ರಯೋಗ ಇಂದಿಗೂ ಮೌಖಿಕ ಪರಂಪರೆಯಲ್ಲೇ ಉಳಿದಿದೆ. ಕೊಡವ ಭಾಷೆ ಬರೆಹಕ್ಕಿಳಿಯುವ ಕಾರ್ಯ ಇತ್ತೀಚೆಗೆ ಆರಂಭವಾಗಿದೆ. ಕೊಡವ ಪತ್ರಿಕೆಗಳು, ಕೊಡವ ಅಕಾಡೆಮಿ ಈ ಕೆಲಸವನ್ನು ಮಾಡುತ್ತಿವೆ. ಸಾಹಿತ್ಯ ಮಾಡಲೇ ಬೇಕಾದ ಸಂವಹನ ಮತ್ತು ಜೀರ್ಣಿಸಿಕೊಳ್ಳುವಿಕೆಯನ್ನು ಕೊಡವ ಭಾಷೆಯಲ್ಲೂ ಸಾಹಿತ್ಯ ರಚನಾಕಾರರು ಮಾಡಿಕೊಂಡರೆ ಕೊಡವ ಸಾಹಿತ್ಯವೂ ಬೆಳೆದೀತು.

ಮುಂದೊಂದು ಕಾಲಕ್ಕೆ ಕೊಡವ ಸಾಹಿತ್ಯ ಪ್ರಾಚೀನವಾದೀತು: ಅಳಿದು ಹೋಗದು ಎಂಬರ್ಥದಲ್ಲ.

ಎಲೆಮರೆ

# ಪ್ರೊ. ಕೆ.ಜಿ. ಕುಂದಣಗಾರ

● ಎಂ.ಜಿ. ಬಿರಾದಾರ

ಪ್ರೊ. ಕಲ್ಲಪ್ಪ ಗಿರಿಮಲ್ಲಪ್ಪ ಕುಂದಣಗಾರರು ಹುಟ್ಟಿ ನೂರೈದು ವರ್ಷ (೧೪-೮-೧೮೮೫) ತೀರಿ ಮೂವತ್ತೈದು ವರ್ಷ(೨೨-೮-೧೯೭೫)ಗಳಾದವು. ಸಂಪೂರ್ಣ ಮರಾಠಿಮಯ ಬೆಳಗಾವಿಯ ಚಿಕ್ಕ ಹಳ್ಳಿ ಕೌಜಲಗಿಯಲ್ಲಿ ಅವರ ಹುಟ್ಟು. ಕಡುದಾರಿದ್ರ್ಯದ ಒಂದೇ ಒಂದಾದ ಪತ್ತಾರ ಕುಟುಂಬ. ಇವರ ವೃತ್ತಿಗೆ ಬೇಕಾದ ಬೆಳ್ಳಿ ಬಂಗಾರ ಆ ಊರಲ್ಲೇ ಇರಲಿಲ್ಲ. ಎರಡು ವರ್ಷದ ಬಾಲ್ಯದಲ್ಲೇ ತಂದೆ ತೀರಿಕೊಂಡರೆ, ಮರುವರ್ಷವೇ ತಾಯಿ ಇಲ್ಲವಾದರು. ಗಂಜಿಗೂ ಗತಿ ಇಲ್ಲದ ಪರಿಸ್ಥಿತಿಯಲ್ಲಿ ಕಕ್ಕ ನಿಂಗಪ್ಪ ಇವರನ್ನು ಸಾಕಿದರು. ನಿಂಗಪ್ಪನೂ ಕೀರ್ತನೆ ಹೇಳಿ ಹೊಟ್ಟೆ ಹೊರೆಯುವವ. ಅವನ ಜೊತೆ ತಾಳ, ಏಕದಾರಿ, ಹಿಡಿದುಕೊಂಡು ಕಲ್ಲಪ್ಪ ಬೆನ್ನುಹತ್ತಿದ. ವಚನ, ದಾಸರ ಪದ ನಡುಗನ್ನಡ ಕಾವ್ಯಗಳಲ್ಲಿ ಆಸಕ್ತಿ ಬೆಳದಿದ್ದೇ ಆಗ. ಬಿಡುವು ಸಿಕ್ಕರೆ ಶಾಲೆ, ಹೇಗೋ ಪ್ರಾಥಮಿಕ ಹಂತ ಮುಗಿಸಿದ. ಹಲವರ ಒತ್ತಾಯಕ್ಕೆ ಬೆಳಗಾವಿಯ ಹೈಸ್ಕೂಲ ಸೇರಿದ. ಖರ್ಚಿಗಾಗಿ ಆ ವಯಸ್ಸಿನಲ್ಲಿ ಒಂದು ಸರಾಫಿ ಅಂಗಡಿಯಲ್ಲಿ ಲೆಕ್ಕ ಬರೆಯುವುದು. ಅದರಿಂದ ತಿಂಗಳಿಗೆ ನಾಲ್ಕು ರೂಪಾಯಿ ಸಂಬಳ. ಅವರ ದೂರದ ಸಂಬಂಧಿ, ಭೀಮಪ್ಪನವರು ಕಲಿಸಲು ಧಾರವಾಡಕ್ಕೆ ಕರೆತಂದರು. ಮಕ್ಕಳಿಲ್ಲದ ಅವರು ವಾತ್ಸಲ್ಯವನ್ನೆಲ್ಲ ಧಾರೆ ಎರೆದು ಬೆಳಸಿದರು. ಅವರಿಗೆ ನೆರವಾಗುತ್ತ ಕುಲಕಸಬನ್ನೂ ಕಲಿತರು. ಹೀಗೆ ೧೯೦೯ರಲ್ಲಿ ಮ್ಯಾಟ್ರಿಕ್ ಮುಗಿಸಿದರು. ಯಾರದೋ ನೆರವಿನಿಂದ ಪುಣೆಯ ಫರ್ಗ್ಯುಸನ್ ಕಾಲೇಜ ಸೇರಿದರು. ಕೊಲ್ಹಾಪುರದಲ್ಲಿ ಶಿಕ್ಷಕರಾಗಿ ಕೆಲಸ ಮಾಡುತ್ತ ೧೯೧೯ ರಲ್ಲಿ ಬಿ.ಎ. ಪದವೀಧರರಾದರು. ತಮ್ಮ ತಾಲೂಕಾದ ಗೋಕಾಕ ಹೈಸ್ಕೂಲಕ್ಕೆ ಬಂದು ಶಿಕ್ಷಕರಾದರು. ಅಲ್ಲಿದ್ದುಕೊಂಡೇ ೧೯೨೫ರಲ್ಲಿ ಕನ್ನಡದಲ್ಲಿ ಎಂ.ಎ. ಮಾಡಿದರು.

ಇಡೀ ಉತ್ತರ ಕರ್ನಾಟಕದ ಒಂದೇ ಒಂದಾದ ಕಾಲೇಜ ಧಾರವಾಡದ ಕರ್ನಾಟಕ ಕಾಲೇಜ. ಅದು ೧೯೧೭ರಲ್ಲಿ ಆರಂಭವಾದರೂ ಅರ್ಹ ಕನ್ನಡ ಪ್ರಾಧ್ಯಾಪಕರಿಲ್ಲದ್ದಕ್ಕೆ ಸಂಸ್ಕೃತ ಪ್ರಾಧ್ಯಾಪಕರೇ ಕನ್ನಡ ಕಲಿಸುತ್ತಿದ್ದರಂತೆ. ಕೆ.ಜಿ. ಕುಂದಣಗಾರರು ೧೯೨೫ರಲ್ಲಿ ಪ್ರಥಮ ಕನ್ನಡ ಪ್ರಾಧ್ಯಾಪಕರಾಗಿ ಅಲ್ಲಿ ನೇಮಕಗೊಂಡರು. ಆದರೆ ಕೆಲವರ ಕುತಂತ್ರದಿಂದಾಗಿ ಎರಡೇ ವರ್ಷದಲ್ಲಿ ಸರಕಾರ ಅವರನ್ನು ಬಿಡುಗಡೆ ಮಾಡಿತು. ಮತ್ತೆ ಬೀದಿಗೆ ಬಂದ ಇವರನ್ನು

ಕೊಲ್ಹಾಪುರ ಸಂಸ್ಥಾನದ ಅಂದಿನ ದಿವಾನರಾಗಿದ್ದ ದಿ. ಅಣ್ಣಾಸಾಹೇಬ ಲಠ್ಠೆ ಅವರು ಅಲ್ಲಿ ಕರೆಯಿಸಿಕೊಂಡು, ಕನ್ನಡ ವಿದ್ಯಾರ್ಥಿಗಳಿಗೆ ಇಲ್ಲದ ಅಲ್ಲಿಯ ರಾಜಾರಾಮ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರೆಂದು ನೇಮಕ ಮಾಡಿಕೊಂಡರು. ಪ್ರಾಚ್ಯವಸ್ತು ಇಲಾಖೆಯ ಕೆಲಸ ಇವರಿಗೆ ವಹಿಸಿಕೊಟ್ಟರು. ಪ್ರೊ. ಕುಂದಣಗಾರರು ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡು ಎರಡೇ ವರ್ಷದಲ್ಲಿ ಅದನ್ನೊಂದು ಪ್ರಾಚ್ಯವಸ್ತು ಸಂಸ್ಥೆಯಾಗಿ ಪರಿವರ್ತಿಸುವಷ್ಟು ಕೆಲಸ ಮಾಡಿದರು.

ಪ್ರಾಧ್ಯಾಪಕರಾಗಿ ಬಂದ ಕುಂದಣಗಾರರು ಇಲ್ಲಿ ಮತ್ತೆ ವಿದ್ಯಾರ್ಥಿಯಾದರು. ಶಿಲ್ಪ, ಲಿಪಿ, ನಾಣ್ಯ, ಶಾಸನ, ಪ್ರಾಕ್ತನವಸ್ತು, ಗ್ರಂಥಸಂಪಾದನ ಶಾಸ್ತ್ರಗಳನ್ನು ಇಂಗ್ಲೀಷ್ ಮೂಲದಿಂದ ಅಧ್ಯಯನ ಮಾಡಿದರು. ಇದರಿಂದಾಗಿ ಅವರೊಬ್ಬ ಪ್ರಮುಖ ಸಂಶೋಧಕರಾಗಲು ಸಾಧ್ಯವಾಯ್ತು. ಅವರ ಸಂಶೋಧನಾತ್ಮಕ ಚೊಚ್ಚಲು ಕೃತಿ, Some notes on Mahalaxmi Temple, kolhapur, ಅವರನ್ನು ಖ್ಯಾತ ಸಂಶೋಧಕರೆಂದು ಗುರುತಿಸುವಂತೆ ಮಾಡಿತು. ಅವರು ಕೊಲ್ಹಾಪುರ, ವಿಜಾಪುರ, ಬೆಳಗಾಂವ, ಧಾರವಾಡಗಳ ಹಲವಾರು ಹಳ್ಳಿಗಳನ್ನೆಲ್ಲ ತಿರುಗಾಡಿ ಸಾಹಿತ್ಯ, ಸಂಸ್ಕೃತಿ, ಕಲೆಗಳಿಗೆ, ಸಂಬಂಧಪಟ್ಟದ್ದೆಲ್ಲವನ್ನೂ ಸಂಗ್ರಹಿಸಿದರು. ವಿಶೇಷವಾಗಿ ಶಾಸನ, ಶಿಲ್ಪ, ಜಾನಪದಕ್ಕೆ ಸಂಬಂಧಪಟ್ಟುದೆಲ್ಲವೂ ಅವರ ಸಂಗ್ರಹ ಸೇರಿತು. ಜೊತೆಗೆ, ಸೌಲಭ್ಯಗಳಿಲ್ಲದೆ ಶಿಕ್ಷಣ ನಿಲ್ಲಿಸಿದ ಗ್ರಾಮೀಣ ಯುವಕರನ್ನು ಕೊಲ್ಹಾಪುರಕ್ಕೆ ಬರಹೇಳಿ ಅವರಿಗೆ ಶಿಕ್ಷಣ ಮುಂದುವರಿಸಲು ಎಲ್ಲ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟರು. ತಮ್ಮ ಸಂಬಳದ ಕಾಲುಭಾಗ ಬಡ ವಿದ್ಯಾರ್ಥಿಗಳಿಗಾದರೆ, ಅದರಷ್ಟೇ ಮೊತ್ತ ಸಂಶೋಧನೆಗೆ, ಇನ್ನೊಂದು ಕಾಲುಭಾಗ ಪುಸ್ತಕ ಕೊಳ್ಳಲು. ಉಳಿದುದರಲ್ಲಿ ಚಟ್ನಿರೊಟ್ಟಿಯ ಬದುಕು.

ನಸುಕಿನಲ್ಲೆದ್ದು ಹಾಸ್ಟೆಲ್ ಮತ್ತು ಫ್ರೀಬೋರ್ಡಿಂಗ್ ವಿದ್ಯಾರ್ಥಿಗಳನ್ನೂ ಎಬ್ಬಿಸಿ ಓದಲು ಹಚ್ಚಿ ಅವರು ಬ್ರಹ್ಮಪುರಿಯ ಬೆಟ್ಟ ಅಗೆಯಲು ಗುದ್ದಲಿ ಸಲಿಗೆ ಹೊತ್ತು ಹೋಗಿ ಕಾರ್ಯತತ್ಪರರು. ಉತ್ಖನನದಲ್ಲಿ ಉಪಲಬ್ಧ ಪಳವುಳಿಕೆಗಳನ್ನೆಲ್ಲ ಸಂಗ್ರಹಿಸಿ, ಸರಿಯಾದ ವೇಳೆಗೆ ಕಾಲೇಜಕ್ಕೆ ಹಾಜರು. ಸಂಜೆ ಕಂದೀಲ ಬೆಳಕಿನಲ್ಲಿ ಸಂಗ್ರಹಿಸಿದ ಎಲ್ಲವಸ್ತುಗಳ ವಿಶ್ಲೇಷಣೆ, ವಿವರಣೆ ಕುರಿತಾದ ಬರಹ. ಇದು ಅವರ ದಿನಚರಿ. ಬ್ರಹ್ಮಪುರಿ ಬೆಟ್ಟ ಸವೆದೊಡನೆ ಪಂಚಗಂಗಾ ತೀರದಲ್ಲಿ ಈ ಕಾರ್ಯ. ಹೀಗೆ ನಿರಂತರ ಹದಿನೈದು ವರ್ಷ ಸಂಶೋಧನೆಯ ಮೂಲ ಆಕರಗಳನ್ನು ಶೋಧಿಸಿದರು. ಲೇಖನ ಬರಹವಂತೂ ಸಾಗಿಯೇ ಇತ್ತು. ಅವರ ನಾಣ್ಯಗಳ ಶೋಧನೆಯೇ ಒಂದು ದೊಡ್ಡ ಸಾಧನೆಯಾಗಿತ್ತು. ೧೯೩೯ರಲ್ಲಿ ಪ್ರಕಟವಾದ ಅವರ 'Inscription in Northern Karnatak and the Kolhapur State' ಇದು ಶಾಸನಗಳ ಸಂಶೋಧನಾತ್ಮಕ ಮೌಲಿಕ ಅಧ್ಯಯನ. ಇದರಿಂದಾಗಿ ಕುಂದಣಗಾರರ ಖ್ಯಾತಿ, ಅವರನ್ನು ರಾಷ್ಟ್ರಮಟ್ಟದ ಸಂಶೋಧಕರ ಸಾಲಿಗೆ ಸೇರಿಸಿತು. ಅವರ ಲೇಖನಗಳ ಸಂಖ್ಯೆ ಸುಮಾರು ೧೨೦ ಕನ್ನಡ ಮತ್ತು ೪೦ ಇಂಗ್ಲೀಷ್. ಕನ್ನಡದ ನೂರು ಲೇಖನ ಸಂಗ್ರಹ, ಕ.ಸಾ.ಪ. ದ ಪ್ರಕಟಣೆಯಾಗಿ ಬಂದಿದೆ. ಎಂಟರಷ್ಟು ಇಂಗ್ಲೀಷ್ ಲೇಖನಗಳು ದೊರೆಯುವುದ

ಪಂತದಲ್ಲಿವೆ. ಸುಮಾರು ೫೦ ಲೇಖನಗಳು ಉಪಲಬ್ಧವಾಗದಿರುವ ನೋವು ನನಗಿದೆ.

ಪ್ರೊ. ಕುಂದಣಗಾರರ ಹನ್ನೆರಡು ಕೃತಿಗಳು ಉಪಲಬ್ಧವಿವೆ. ಅವುಗಳಲ್ಲಿ ೯ ಸಂಪಾದಿತ., ೩ ಸ್ವತಂತ್ರ,. ಹತ್ತು ಕೃತಿಗಳ ಅಧಿಕೃತ ಉಲ್ಲೇಖಗಳಿವೆ. ಕೃತಿಗಳು ಸಿಕ್ಕುತ್ತಿಲ್ಲ, ಇದರಿಂದಲೇ ಊಹಿಸಬಹುದು ಅವರೆಷ್ಟು ಉಪೇಕ್ಷಿತರೆಂದು.

ಕನ್ನಡ, ಇಂಗ್ಲೀಷ್, ಮರಾಠಿ, ಪಾಲಿ, ಸಂಸ್ಕೃತ, ಅರ್ಧ ಮಾಗಧಿ ಭಾಷೆಗಳನ್ನು ಬಲ್ಲವರು. ಜೈನ, ವೀರಶೈವ ಸಾಹಿತ್ಯದಲ್ಲಿ ಅಪಾರ ಸಂಶೋಧನೆ ಮಾಡಿದ್ದಲ್ಲದೆ, ಜಾನಪದ ಸಾಹಿತ್ಯಕ್ಕೆ ವಿಶ್ವವಿದ್ಯಾಲಯದಲ್ಲಿ ಸ್ಥಾನ ಕಲ್ಪಿಸಿದವರು ಇವರು. ಶಾಸ್ತ್ರ ಸಾಹಿತ್ಯದಲ್ಲಿ ಕುಂದಣಗಾರ ಕೃಷಿ ಎಂದೂ ಸ್ಮರಿಸುವಂಥದು. ಅನುವಾದ ಮಾಡಿದ ಹಲವಾರು ಕೃತಿಗಳು ಉಪಲಬ್ಧವಾಗದ ಹಾನಿ ಕನ್ನಡಕ್ಕಿದೆ. 'ವಾಗ್ಭೂಷಣ', 'ಜಿನವಿಜಯ' ಪತ್ರಿಕೆಗಳ ಸಂಪಾದಕರಾಗಿ ಸಂದ ಅವರ ಸೇವೆ ಸದಾ ಸ್ಮರಣೀಯ. ಮೈಸೂರು ವಿಶ್ವವಿದ್ಯಾನಿಲಯ, ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಸಂಪಾದಕ ಮಂಡಳಿಯಲ್ಲಿಯ ಅವರ ಪಾಂಡಿತ್ಯ ಎಂದೂ ಮರೆಯದಂಥದು. ಛಂದಶ್ಶಾಸ್ತ್ರ, ನಾಣ್ಯ, ಶಾಸನ, ಶಿಲ್ಪಗಳನ್ನು ಕುರಿತು ಅವರು ಇಂಗ್ಲೀಷದಲ್ಲಿ ಬರೆದ ಲೇಖನಗಳು ಕನ್ನಡ ಸಾಹಿತ್ಯಕ್ಕೆ ಮಾಡಿದ ಮಹದುಪಕಾರವೇ ಸರಿ.

ಮರಾಠಿಗರ ಮಧ್ಯೆನಿಂತು ಕನ್ನಡದ ಸೇವೆ ಮಾಡಿದ ಇವರು ಮರಾಠಿಗರಿಗೆಲ್ಲ ಗುಣಗೌರವದ 'ಅಣ್ಣ'ನಾಗಿದ್ದರು. ಕನ್ನಡ-ಮರಾಠಿ ಭಾಷಿಕರ ನಡುವೆ ಸಾಂಸ್ಕೃತಿಕ ಕೊಂಡಿಯಾಗಿದ್ದ ಕುಂದಣಗಾರರು ಪರಿಶುದ್ಧ ಮಾನವಾಂತಃಕರಣದ ಪರಮ ಪ್ರಾಮಾಣಿಕ ವ್ಯಕ್ತಿಯಾಗಿದ್ದರು. ೧೯೪೮ರಲ್ಲಿ ನಿವೃತ್ತರಾದ ಅವರು ಬೆಳಗಾವಿಗೆ ಬಂದು ನೆಲೆಸಿದರು. ಅವರು ಬರುವಾಗ ತಂದದು ಅಪ್ರತಿಮ ಪುಸ್ತಕ ಭಂಡಾರ ಮಾತ್ರ. ಮುಂದೆ ೧೯೬೦ರವರೆಗೆ ಬೆಳಗಾವದ ಆರ್.ಪಿ.ಡಿ. ಕಾಲೇಜದಲ್ಲಿ ಗೌರವ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ಕರ್ನಾಟಕ ವಿಶ್ವವಿದ್ಯಾಲಯ ಅವರನ್ನು ಪಿಎಚ್.ಡಿ.ಯ ಮಾರ್ಗದರ್ಶಕರೆಂದು ಮಾನ್ಯಮಾಡಿತ್ತು. ಅಂಥ ಅರ್ಹ ಮಾರ್ಗದರ್ಶಕರು ಇಲ್ಲವೆಂದೇ ಹೇಳಬೇಕು. ನಾಡಿನ ಒಳಹೊರಗಿನ ಎಲ್ಲ ವಿಶ್ವವಿದ್ಯಾಲಯಗಳ ಪಠ್ಯಕ್ರಮ ರೂಪಿಸಿದವರೇ ಪ್ರೊ. ಕುಂದಣಗಾರರು. ಧಾರವಾಡಕ್ಕೊಂದು ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ ಸಂಸ್ಥಾಪಿಸುವಲ್ಲಿ ಅವರ ಪ್ರಭಾವ ಪ್ರಯತ್ನಗಳು ಸ್ಮರಿಸುವಂಥವು.

ಕುಂದಣಗಾರರ ಪುಸ್ತಕ ಪ್ರೇಮ, ವಿದ್ಯಾರ್ಥಿ ಪ್ರೀತಿ ಅನಾದೃಶ್ಯ. ಆ ಕಾಲಕ್ಕೆ ಅವರಲ್ಲಿ ಸುಮಾರು ೨೫ ಸಾವಿರ ರೂಪಾಯಿ ಮುಖ ಬೆಲೆಯ ಪುಸ್ತಕಗಳು ಅವರ ಸಂಗ್ರಹದಲ್ಲಿದ್ದವು. ಅವೆಲ್ಲವೂ ಓದಿ ಗುರುತು ಹಾಕಿ ಇಟ್ಟವುಗಳು. ಊಟ, ಔಷಧಕ್ಕೂ ಗತಿ ಇಲ್ಲದಾಗ ಕರ್ನಾಟಕ ವಿಶ್ವವಿದ್ಯಾಲಯ ೨೦ ಸಾವಿರ ರೂಪಾಯಿ ಕೊಟ್ಟು ಅವರ ಪುಸ್ತಕ ತನ್ನದಾಗಿಸಿಕೊಳ್ಳಲು ಕೇಳಿದಾಗಲೂ ಅವನ್ನು ಕೊಡಲು ನಿರಾಕರಿಸಿದ ಪ್ರೀತಿ ಅವರದು. ರಾಜಾರಾಮ ಕಾಲೇಜದಲ್ಲಿಯೂ ಅವರು ಸಂಗ್ರಹಿಸಿದ ಕನ್ನಡ ಪುಸ್ತಕ ಭಂಡಾರ ಇನ್ನೂ ಇದೆ.

ಯಾರ ಋಣದಲ್ಲಿರದ, ಯಾರಿಂದಲೂ ಒಂದು ಪೈಸೆ ಪಡೆಯದ ಪ್ರಾಮಾಣಿಕ ಪಣ

ಭಾರವಾಗಿತ್ತು. ತಮ್ಮ ಊರಲ್ಲಿಯ ಮನೆ ಮಾರಿ ಆ ಹಣವನ್ನು ಆ ಊರ ಹೈಸ್ಕೂಲಿಗೆ ದಾನವಾಗಿತ್ತರು. ೪೫ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನ ಮಾತ್ರ ಕನ್ನಡಿಗರು ಅವರಿಗೆ ಸಲ್ಲಿಸಿದ ಗೌರವ. ೧೯೪೯ರಲ್ಲಿ ಮುಂಬೈಯಲ್ಲಿ ನಡೆದ ಓರಿಯಂಟಲ್ ಕಾನ್ಫರನ್ಸ್‌ನಲ್ಲಿ ದಕ್ಷಿಣ ಭಾಷಾ ಗೋಷ್ಠಿಯ ಅಧ್ಯಕ್ಷಸ್ಥಾನ ರಾಷ್ಟ್ರೀಯ ಮಟ್ಟದ ಗೌರವ. ಅವರು ಬಿರುದು-ಬಿರಿದ ಮುಂತಾದುವನ್ನಲ್ಲದೆ ಏನನ್ನೂ ನಂಬಿದವರಲ್ಲ. ಹಲವಾರು ಜನರಿಂದ ವಂಚಿತರಾದ ಅವರು ಸದಾ ಓದಿನಲ್ಲಿಯೇ ಇರುತ್ತಿದ್ದರು. ಕನ್ನಡದ ಕೆಲಸಕ್ಕೆ ಸದಾ ಸಿದ್ಧರು.

ಜೀವನವನ್ನು ಕನ್ನಡಕ್ಕಾಗಿ ತಪಸ್ಸೆಂದು ತಿಳಿದು ಬದುಕಿದ ಪ್ರೊ. ಕುಂದಣಗಾರರ ಬದುಕಿನ ದುರಂತ ಬಹಳ ಜನರಿಗೆ ಗೊತ್ತಾಗೇ ಇಲ್ಲ. ಅನ್ನ ಔಷಧಕ್ಕೆ ಗತಿ ಇಲ್ಲದೆ ಕೊನೆ ಉಸಿರೆಳೆದರು. ಮುಂದೆ ಮೂರು ತಿಂಗಳಲ್ಲೇ ಅವರ ಧರ್ಮಪತ್ನಿ ಕಮಲಮ್ಮ ಬೀದಿಯಲ್ಲೇ ಬಿದ್ದು ಪ್ರಾಣಬಿಟ್ಟರಂತೆ. ದುಃಖದ ಸಪ್ತಸಾಗರವನ್ನೇ ಕುಡಿದು ಸದಾ ಹಸನ್ಮುಖಿಯಾಗಿ, ಕನ್ನಡದ ಚಿಂತಕರಾಗಿ ಬದುಕನ್ನು ತೇಯ್ದರು.

ಪ್ರೊ. ಕುಂದಣಗಾರರು ಪ್ರಥಮ ಸಾಲಿನ ಶ್ರೇಷ್ಠ ಸಂಶೋಧಕರು. ಘನ ವಿದ್ವಾಂಸರು. ಪ್ರಾಮಾಣಿಕತೆಗೊಂದು ಹೆಸರು ಎಂದು ಹೇಳುವ ಮಾತಿನಲ್ಲಿ ಉತ್ಪ್ರೇಕ್ಷೆ ಇಲ್ಲ. ಅಪಾರ ಕನ್ನಡಾಭಿಮಾನಿಗಳನ್ನು ಸೃಷ್ಟಿಸಿದ ಶ್ರೇಯಸ್ಸು ಅವರಿಗಿದೆ. ಕಾಲೇಜು ಪ್ರಾಧ್ಯಾಪಕರಾಗಿದ್ದು, ಹಲವಾರು ವಿಶ್ವವಿದ್ಯಾಲಯಗಳು ಸಂಘ ಸಂಸ್ಥೆಗಳು ಮಾಡುವ ಕೆಲಸವನ್ನು ಅವರು ಮಾಡಿದ್ದಾರೆ. ಆದರೆ ಕನ್ನಡಿಗರಾರೂ ಆ ಕಡೆ ಕಣ್ಣೆತ್ತಿ ನೋಡಲಿಲ್ಲ.

ಪ್ರೊ. ಕುಂದಣಗಾರರನ್ನು ನಿರ್ಲಕ್ಷಿಸಿದ್ದಕ್ಕೆ ಕಾರಣ ನನಗೆ ತಿಳಿದಂತೆ ಮೂರು. ಅವರು ಕರ್ನಾಟಕದಿಂದ ಹೊರಗಿದ್ದುದು ಒಂದಾದರೆ, ಅವರು ಉತ್ತರ ಕರ್ನಾಟಕದವರೆನ್ನುವುದು ಇನ್ನೊಂದು. ತೀರ ಪ್ರಮುಖ ಕಾರಣವೆಂದರೆ ಅವರು ತೀರ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರೆಂಬುದು. ಬಡತನ, ನಿರಾಡಂಬರ, ಅಧಿಕಾರದ ಆಸರೆ ಇಲ್ಲದ ಬದುಕುಗಳೂ ಕೆಲಮಟ್ಟಿಗೆ ಕಾರಣಗಳಾಗುತ್ತವೆ. ಅವರದೇ ಆದ ಒಂದು ಗುಂಪು ಇರಲಿಲ್ಲ. ತಮ್ಮನ್ನು ತೋರಿಸಿಕೊಳ್ಳುವ ವ್ಯಕ್ತಿತ್ವ ಅವರದಾಗಿರಲಿಲ್ಲ. ಆದರೆ ಅವರ ಕಾಲ ಪರಿಸರ ಪರಿಸ್ಥಿತಿಗಳನ್ನು ಗಮನಿಸಿದರೆ, ಅವರ ತ್ಯಾಗ ಸೇವೆಗಳ ಕಲ್ಪನೆ ಬರುತ್ತದೆ. ಕನ್ನಡ ಸಾಹಿತ್ಯ, ಸಂಸ್ಕೃತಿಯ ಚಿನ್ನಕ್ಕೆ ಕುಂದಣವಾಗಿದ್ದ ಕುಂದಣಗಾರರನ್ನೀ ನಾಳಿನ ಪೀಳಿಗೆ ಗಮನಿಸುವುದು ಅನಿವಾರ್ಯವಾಗಬಹುದೇನೋ.

# ಡಾ. ಕೊಡವೂರು ಅನಂತರಾಮ ಭಟ್ಟರು

● ಮಾಧವ ಪೆರಾಜೆ

ಕೊಡವೂರು ಅನಂತರಾಮ ಭಟ್ಟರು ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ಸಮೀಪದ ಕೊಡವೂರಿನಲ್ಲಿ ೨ ಫೆಬ್ರವರಿ ೧೯೦೮ರಲ್ಲಿ ಜನಿಸಿದರು. ಮಾಧ್ವ ಮತದ ಈ ವೈಷ್ಣವ ಬ್ರಾಹ್ಮಣರು ಬಾಲ್ಯದಿಂದಲೇ ಸಂಸ್ಕೃತ ಅಧ್ಯಯನ ಮಾಡಿ, ಕೆಲವು ಕಾಲ ಮೈಸೂರಿನಲ್ಲಿ ಶಿಕ್ಷಣ ಪಡೆದರು. ಆಗಿನ ಕಾಲಕ್ಕೆ ಸಂಸ್ಕೃತ ವಿದ್ವಾಂಸರಿಗೆ ಬೇಡಿಕೆ ಇಲ್ಲವೆಂದು ತಿಳಿದು, ಶ್ರೀಲಂಕಾದಲ್ಲಿ ನಡೆಯುವ ಲಂಡನ್ ಯೂನಿವರ್ಸಿಟಿಯ ಪರೀಕ್ಷೆಗಾಗಿ ಅಲ್ಲಿಗೆ ಹೋದರು.

ಶ್ರೀಲಂಕಾದಲ್ಲಿ ಪರೀಕ್ಷೆಗೆಂದು ಹೋದವರನ್ನು ಉನ್ನತ ವಿದ್ಯಾಭ್ಯಾಸಕ್ಕಾಗಿ ಪ್ರೋತ್ಸಾಹಿಸಿದರು ಪಂಡಿತ ರಾಹುಲ ಸಾಂಕೃತ್ಯಾಯನ ಅವರು. ೧೯೨೮ರಲ್ಲಿ ಭಟ್ಟರಿಗೆ ಕೊಲಂಬೋದಲ್ಲಿ ಪರಿಚಯವಾದ ಸಾಂಕೃತ್ಯಾಯನರು ಭಟ್ಟರ ವಿದ್ವತ್ತು ಲಂಡನ್ ಯೂನಿವರ್ಸಿಟಿಯ ಪರೀಕ್ಷೆಗಿಂತಲೂ ಮಿಗಿಲಾದುದೆಂದು ತಿಳಿದು, ಜರ್ಮನಿಯ ಟುಬಿಂಗನ್ ವಿಶ್ವವಿದ್ಯಾಲಯಕ್ಕೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಕಳುಹಿಸಿದರು. ಮುಂದೆ ಅವರು ಅದೇ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ.ಯನ್ನು ಪಡೆದರಲ್ಲದೆ, ಜರ್ಮನ್ ಭಾಷೆಯ ಮೇಲೆ ಸಂಪೂರ್ಣ ಹಿಡಿತವನ್ನು ಸ್ಥಾಪಿಸಿದರು. ಅಲ್ಲಿ ಅವರು ಅರ್ಥಶಾಸ್ತ್ರದಲ್ಲಿ ಡಿ.ಎಸ್‌ಸಿ. ಡಿಗ್ರಿಯನ್ನು ಪಡೆದು, ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಭಾರತೀಯ ಶಾಸ್ತ್ರದ ಅಧ್ಯಾಪಕರೂ ಆದರು.

ಹೀಗಿರುತ್ತ, ನೇತಾಜಿ ಸುಭಾಶ್ಚಂದ್ರ ಬೋಸ್ ಅವರು ಬ್ರಿಟಿಶರನ್ನು ಕೆಣಕಿ ಭೂಗತರಾದವರು ಜರ್ಮನಿಯನ್ನು ತಲುಪಿದರು. ಆಗ ಹಿಟ್ಲರ್ ಅವರನ್ನು ಗೌರವಿಸಲಾಗಿ-ಜರ್ಮನಿಯಲ್ಲಿ ಬರ್ಲಿನ್‌ನಿಂದ ಪತ್ರಿಕೆಯೊಂದನ್ನು ತರಲು ನಿಶ್ಚಯಿಸಿದರು. ಆ ಪತ್ರಿಕೆ 'ಆಜಾದ್ ಹಿಂದ್' ಪತ್ರಿಕೆ ಎಂದು ಎಲ್ಲರಿಗೂ ಗೊತ್ತೇ ಇದೆ. ಆದರೆ ಅದರ ಸಂಪಾದಕರು ಯಾರೆಂದು ತಿಳಿದವರು ಬೆರಳೆಣಿಕೆಯಷ್ಟೂ ಇರಲಾರರು. ನಮ್ಮ ಕೊಡವೂರು ಅನಂತರಾಮ ಭಟ್ಟರೇ ಅದರ ಸಂಪಾದಕರಾಗಬೇಕೆಂದು ನೇತಾಜಿಯವರೇ ಒಪ್ಪಿದಾಗ ಭಟ್ಟರ ಸಂಪಾದಕತ್ವದಲ್ಲಿ ಆ ಪತ್ರಿಕೆ ಯಶಸ್ವಿಯಾಗಿ ಬರಲಾರಂಭಿಸಿತು.

ಮಹಾಯುದ್ಧದಲ್ಲಿ ಜರ್ಮನಿಯು ಸೋತಾಗ ಭಟ್ಟರು ಮಿತ್ರರಾಷ್ಟ್ರಗಳ ಬಗೆಗೆ ಕಟುವಾದ ವಿಮರ್ಶೆ ಬರೆಯತೊಡಗಿದರು. ಇದರಿಂದ ಆ ರಾಷ್ಟ್ರಗಳ ಕೆಂಗಣ್ಣಿಗೆ ಗುರಿಯಾಗಬೇಕಾಗಿ ಬಂದ ಈ ವಿದ್ವಾಂಸ ಅಲ್ಲಿಂದ ಪಲಾಯನ ಮಾಡಿ, ದಕ್ಷಿಣ ಜರ್ಮನಿಯ ಬವೇರಿ ಪ್ರದೇಶಕ್ಕೆ ಹೋಗಿ ಅಲ್ಲಿ ತಾನು 'ಜಿಪ್ಸಿ' ಎಂದು ಹೇಳಿ ರೈತನೊಬ್ಬನಲ್ಲಿ ಕೆಲಸಕ್ಕೆ ಸೇರಿದರು. ಅಲ್ಲಿ ಕುದುರೆ ಸವಾರಿ ಕಲಿತ ಭಟ್ಟರು ಒಂದು ದಿನ ಕುದುರೆಯಿಂದ ಜಾರಿ ಬಿದ್ದು ಕಾಯಿಲೆ ತಗುಲಿಸಿಕೊಂಡರು. ಇದಾದ ಬಳಿಕ ಸುಮಾರು ೧೮ ವರ್ಷಗಳಷ್ಟು ದೀರ್ಘಕಾಲದ ಜರ್ಮನಿಯ

ಜೈಲಿನಿಂದ ಮುಕ್ತರಾಗಿ ಬಂದರು. ನವೆಂಬರ್ ೮. ೧೯೪೪ರ ವೇಳೆಗೆ ಹೇಗೋ ಪೊಲೀಸ ಕಣ್ಣು ತಪ್ಪಿಸಿ ದೆಹಲಿಗೆ ಬಂದರು. ಮತ್ತೆ ರಾಹುಲ ಸಾಂಕೃತ್ಯಾಯನರನ್ನು ಭೇಟಿಯಾದರು. ಭಟ್ಟರಿಗೆ ಆಗ ಬಾಲ್ಯದ ಬಡತನ ಮತ್ತೆ ಕಾಡಿತು. ಸಾಂಕೃತ್ಯಾಯನರು ಆಗ ಹಿಂದಿ ಹಾಗೂ ಅನ್ಯ ಭಾರತೀಯ ಪಾರಿಭಾಷಿಕ ಕೋಶದ ನಿರ್ಮಾಣದಲ್ಲಿದ್ದರು. ಏಪ್ರಿಲ್ ೧. ೧೯೪೯ ರಂದು ಭಟ್ಟರು ಈ ಕೋಶದಲ್ಲಿ ಸೇರಿಕೊಳ್ಳಲು ಪ್ರಯಾಗಕ್ಕೆ ಬಂದರು.

ಪಶ್ಚಿಮ ಜರ್ಮನಿಯಲ್ಲಿ ತಗುಲಿಕೊಂಡ ಹೃದ್ರೋಗ ಭಟ್ಟರನ್ನು ಈಗ ಬಲವಾಗಿ ಪೀಡಿಸ ತೊಡಗಿತು. ಪ್ರಯಾಗದ ಮೋತಿಲಾಲ್ ಮೆಮೋರಿಯಲ್ ಆಸ್ಪತ್ರೆಯಲ್ಲಿ ಭಟ್ಟರಿಗೆ ಚಿಕಿತ್ಸೆ ದೊರೆಯಿತಾದರೂ ಚೇತರಿಸಲು ಇನ್ನೂ ಕಾಲಾವಕಾಶ ಬೇಕಿತ್ತು. ಹಣದ ಅಡಚಣೆಯಿಂದ ಮುಂದೆ ಎಲ್ಲಿಗೂ ಹೋಗಲಾರದೆ ಭಟ್ಟರು ಅದೇ ಆಸ್ಪತ್ರೆಯಲ್ಲಿಯೇ ಇನ್ನೂ ಸ್ವಲ್ಪ ಕಾಲ ಮುಂದುವರಿದರು.

ಇಲ್ಲಿಯವರೆಗಿನ ವಿವರವನ್ನು ಒದಗಿಸಿದವರು ರಾಹುಲ ಸಾಂಕೃತ್ಯಾಯನರೇ ಆಗಿದ್ದಾರೆ. ಭಟ್ಟರು ಮುಂದೆ ಎಲ್ಲಿಗೆ ಹೋದರು, ಏನಾದರು ಎಂಬುದು ಸಾಂಕೃತ್ಯಾಯನರ ಲೇಖನಿಯ ಕಣ್ಣಿಗೂ ಕಾಣಿಸದೆ ಹೋಗಿದೆ. ಹಾಗಾದುದರಿಂದ ಮುಂದೆ ಯಾರಿಗೂ ಅವರು ಏನಾದರೂ ಎಂದು ಗೊತ್ತಿಲ್ಲ. ರಾಹುಲ ಸಾಂಕೃತ್ಯಾಯನರು ಭಟ್ಟರ ಬಗೆಗೆ ಬರೆದ ಮೂಲ ಲೇಖನವನ್ನು ಕೆ. ಶ್ರೀನಿವಾಸರಾವ್ ಅವರು ಸಂಗ್ರಹಿಸಿ ಕಸ್ತೂರಿ ಪತ್ರಿಕೆಯ ೧೯೭೫ರ ಜುಲೈ ಸಂಚಿಕೆಯಲ್ಲಿ ಪ್ರಕಟಿಸಿದರು. ಆ ಪ್ರಕಾರ ಕಸ್ತೂರಿ ಪತ್ರಿಕೆಯವರು ಭಟ್ಟರ ಹುಟ್ಟೂರಾದ ಉಡುಪಿಯಲ್ಲಿ ವಿಚಾರಿಸಿದರು. ಇದರಿಂದ ತಿಳಿದುಬಂದಂತೆ ಭಟ್ಟರು ಉಡುಪಿ, ಮೈಸೂರು, ತಿರುಪತಿಗಳಲ್ಲಿ ಸಂಸ್ಕೃತಾಭ್ಯಾಸ ಮಾಡಿ ಜರ್ಮನಿಗೆ ಹೊರಟವರು. ಆಗ ಪತ್ನಿ ನಾಲ್ಕು ತಿಂಗಳ ಗರ್ಭಿಣಿ. ಭಟ್ಟರು ಜರ್ಮನಿಗೆ ಹೋಗುವುದಕ್ಕಾಗಿ ಇದ್ದ ಬಿದ್ದ ಆಸ್ತಿ-ಮನೆಗಳನ್ನು ಒತ್ತೆಯಿಟ್ಟರು. ಯುದ್ಧಾರಂಭದ ಅನಂತರ ಹುಟ್ಟೂರಿಗೆ ಅವರ ಬಗೆಗೆ ಯಾವ ಮಾಹಿತಿಯೂ ಬರಲಿಲ್ಲ. ಅವರ ಮನೆ ಸಾಲಿಗರ ಪಾಲಾಯಿತು. ಅವರ ಪತ್ನಿ ಬಡತನದಲ್ಲಿಯೇ ನರಳಿ ೧೯೭೩ರ ಸುಮಾರಿಗೆ ತೀರಿಕೊಂಡರು. ಇವರ ಏಕಮಾತ್ರ ಪುತ್ರ, ಬೆಳಗಾವಿಯಲ್ಲಿ ಹೋಟೇಲ್ ಉದ್ಯಮ ನಡೆಸುತ್ತಿದ್ದಾರೆಂದು ಪ್ರತೀತಿ.

ಉಡುಪಿಯು ಮಧ್ವಾಚಾರ್ಯರಿಂದಾಗಿ ದೇಶಾದ್ಯಂತ ಪ್ರಸಿದ್ಧಿಯಾಗಿದೆ. ಆದರೆ ಅಂತರರಾಷ್ಟ್ರೀಯ ಖ್ಯಾತಿಯ ಶ್ರೀ ಕೊಡವೂರು ಅನಂತರಾಮ ಭಟ್ಟರ ಬಗೆಗೆ ಹುಟ್ಟೂರಿಗೇ ಗೊತ್ತಿಲ್ಲದಿರುವುದು ಚರಿತ್ರೆಯ ವ್ಯಂಗ್ಯವಾಗಿದೆ. ಅಂದ ಹಾಗೆ ರಾಹುಲ ಸಾಂಕೃತ್ಯಾಯನರ ಮಿತ್ರರಾಗಿದ್ದ, ನೇತಾಜಿ ಸುಭಾಷ್ಚಂದ್ರ ಬೋಸರ 'ಆಜಾದ್ ಹಿಂದ್'ನ ಸಂಪಾದಕರಾಗಿದ್ದ ಕನ್ನಡಿಗರೊಬ್ಬರನ್ನು 'ವಿಲೆಮರೆ'ಯ ವಿದ್ವಾಂಸ ಎಂದು ಹೇಳುವುದೂ ವಸಾಹತುಶಾಹಿಯ ಶಾಪವೇ ಇರಬಹುದು.



ಮುಖಾಮುಖಿ

# ಕಡಿದಾಳು ಶಾಮಣ್ಣ ಅವರೊಂದಿಗೆ

● ಸಂಪಾದಕ

(ಕರ್ನಾಟಕದ ರೈತ ಮುಖಂಡರಲ್ಲಿ ಒಬ್ಬರಾದ ಕಡಿದಾಳು ಶಾಮಣ್ಣ ಅವರು, ಅನೇಕ ಜನಪರ ಚಳುವಳಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಲೋಹಿಯಾವಾದಿಯಾದ ಅವರು ಗೋಪಾಲಗೌಡರ ಶಿಷ್ಯರಲ್ಲಿ ಒಬ್ಬರು. ಫೋಟೋಗ್ರಾಫರ್ ಹಾಗೂ ಸರೋದ್ ವಾದಕ ಕೂಡ ಆಗಿರುವ ಶಾಮಣ್ಣ, ಈಗ ಶಿವಮೊಗ್ಗ ಜಿಲ್ಲೆಯ ಮೈದೊಳಲು ಎಂಬಲ್ಲಿ ವಾಸವಾಗಿದ್ದಾರೆ. ಒಂದು ಹಳ್ಳಿಯಲ್ಲಿದ್ದುಕೊಂಡು ಅವರು ಮಾಡುತ್ತಿರುವ ಅನೇಕ ಪ್ರಯೋಗಗಳು ಅವರೊಬ್ಬ ಕನಸುಗಾರ ಹಾಗೂ ಭಿನ್ನಚಿಂತಕ ಎಂಬುದಕ್ಕೆ ಸಾಕ್ಷಿಯಾಗಿವೆ. ಶಾಮಣ್ಣನವರ ಅನುಭವಗಳು ರೋಚಕವಾಗಿವೆ; ಚಿಂತನೆಗಳು ತೀಕ್ಷ್ಣವೂ ಗಂಭೀರವೂ ಆಗಿವೆ. ತುಂಬ ಹಾಸ್ಯಪ್ರಜ್ಞೆಯುಳ್ಳ ಅವರ ಜತೆ ಮಾತಾಡುವುದಕ್ಕೆ ಸಂತೋಷವಾಗುತ್ತದೆ. ದಿನಾಂಕ: ೧೮ ಜೂನ್, ೨೦೦೦ರಂದು ಅವರ ಈ ಸಂದರ್ಶನವನ್ನು 'ಕನ್ನಡ ಅಧ್ಯಯನ'ಕ್ಕಾಗಿ ಮಾಡಲಾಯಿತು.)

ಸಂ: ಪೂರ್ಣಚಂದ್ರತೇಜಸ್ವಿಯವರೂ ನೀವೂ ಗಾಢ ಸ್ನೇಹಿತರು. ಅವರ 'ಅಣ್ಣನ ನೆನಪು' ಪುಸ್ತಕದಲ್ಲಿ ಕುವೆಂಪು ಅವರಿಗಿಂತ ನಿಮ್ಮ ಬಗ್ಗೇನೇ ಹೆಚ್ಚಾಗಿದೆ. ನೀವು ಎಲ್ಲಿ ಸ್ನೇಹಿತರಾದ್ರಿ?

ಶಾ: ಆಗುಂಬೆ ಹತ್ರ ಇರೋ ಮೇಗರವಳ್ಳೀಲಿ, ಮಿಡ್ಲ್ ಸ್ಕೂಲು ಹೈಸ್ಕೂಲು ಓದಿದೆ. ಅಲ್ಲಿ ಹೈಸ್ಕೂಲ್ ಮುಗಿತಾ, ಇಂಟರ್ ಮಿಡಿಯಟ್ಟಿಗೆ ಶಿಮೊಗ್ಗಕ್ಕೆ ಬಂದು ಸೇರಿಕೊಂಡೆ. ಅಲ್ಲಿಗೆ ತೇಜಸ್ವೀನೂ ಬಂದು ಸೇರ್ಕೊಂಡಿದ್ರು. ಅಲ್ಲೇ ಅವರ ಪರಿಚಯ, ಕುವೆಂಪು ಪರಿಚಯ ಆಗಿದ್ದು. ಆಮೇಲೆ ಎಲ್ಲಾರು ಮಾತಾಡ್ತಿದ್ರರಲ್ಲ ಕುವೆಂಪು ಕುಪ್ಪಳ್ಳಿಯವ್ರು ಅಂತ. ಕುಪ್ಪಳ್ಳಿ ಕಡಿದಾಳು ಅಕ್ಕಪಕ್ಕದ್ ಹಳ್ಳಿಗಳು. ತೇಜಸ್ವಿ ಅವರು 'ಏ ನಾನು ಕುಪ್‌ಳಿಗೋಗಬೇಕಲ್ಲ' ಅಂದ್ರು. 'ನಡೀರಿ, ಅಲ್ಲೆಲ್ಲ ಓಡ್ಯಾಡನ' ಅಂದೆ. ಇಬ್ರೂ ಸ್ನೇಹಿತರಾಗಿಬಿಟ್ವಿ.

ಸಂ: ಅಲ್ಲೀವರೆಗೂ ತೇಜಸ್ವಿ ಕುಪ್ಪಳೀನ ನೋಡೇ ಇರಲಿಲ್ಲವಾ?

ಶಾ: ನೋಡಿದ್ರು, ಪುಟ್ಟಪ್ಪನವರ ಜೊತೇಲಿ ಹೋಗೋದು ವಾಪಸ್ ಬರೋದು ಅಷ್ಟೆ. ನಾನು ಅಲ್ಲಿಯವ್ನೇ ಆದುದ್ರಿಂದ ಒಳ್ಳೆ ಸ್ನೇಹಿತ್ರಾಗ್ಬಿಟ್ವಿ.

ಸಂ: ಶ್ರೀ ಪುಟ್ಟಪ್ಪನವರು ಓದೋಕೆ ಮೈಸೂರು ಬಿಟ್ಟು ಶಿವಮೊಗ್ಗಕ್ಕೆ ಯಾಕೆ ಬಂದದ್ದು?

ಶಾ: (ನಗುತ್ತಾ) ಅವರ್ನ! ಅವರು ಬಂದಿದ್ದೊಂದು ದೊಡ್ಡ ಕತೆ. ಅವ್ರಿಗೆ ಮೈಸೂರಲ್ಲಿ, ಬಿ ಬಿ ಎಸ್‌ಗೆ ಕಳಿಸ್ಬೇಕು ಅಂತ್ಹೇಳಿ ಸೈನ್ಸ್ ಕೊಡಿಸ್ಬಿಟ್ಟಿದ್ರು. ಸೈನ್ಸ್ ಇವರಿಗೆ ಹತ್ತಂಗಿಲ್ಲ. ಅದರಲ್ಲಿ ಫೇಲಾಗಿ, ರಗಳೆ ಬೇಡ ಅಂತ ಕಡೆಗೆ ಶಿವಮೊಗ್ಗಕ್ಕೆ ಬಂದು, ಆರ್ಟ್ಸ್ ತೊಗೊಂಡ್ ಓದಿ ಪಾಸ್ ಮಾಡ್ಕೊಂಡ್ ಹೋಗಿದ್ದು.

ಸಂ: ಶಾಮಣ್ಣಾ, ಕುವೆಂಪು ಅವರ ಬಗ್ಗೆ ಆಗಿನ ಮಲೆನಾಡಿನ ಜನರ ಅದರಲ್ಲೂ ಒಕ್ಕಲಿಗರ ಭಾವನೆ ಹ್ಯಾಗಿತ್ತು?

ಶಾ: (ನಗುತ್ತಾ) ನಮ್ ಮಾವ ಒಬ್ರಿದ್ರು, ಮುಂಡುಕಟ್ಟೆ ಅದೆಂಥದೋಗೌಡ್ರು ಅಂತ್ಹೇಳಿ. ಅವ್ರೊಂದ್ ಮಾತ್ ಬಹಳ ಚೆನ್ನಾಗಿ ಹೇಳೋರು. 'ಅವ್ನೊಬ್ಬ ಪುಟ್ಟಪ್ಪ ಅಂತೆ ಪುಟ್ಟಪ್ಪ, ಒಂದ್ ಅಮಲ್ದಾರಿಕೇನೊ ಶೇಕದಾರಿಕೇನೊ ಮಾಡ್ಕೊಂಡ್ ಇರೋದ್ ಬಿಟ್ಕಂಡು, ಬರೀತಾನಂತೆ ಬರೀತಾನಂತೆ. ಏನ್ತದ್ ಬರೀತಾನೆ? ಯಾವನ್ ಕೇಳ್ತಾನೆ ಅದುನ್ನ?' ಈ ರೀತಿಯಾಗಿ ಮಾತಾಡ್ಕಳ್ತಿದ್ರು ಆವಾಗ ಜನ. ಪುಟ್ಟಪ್ಪನೋರು ಅಂದ್ರೆ ಬೆಲೇನೇ ಇಲ್ಲ!

ಸಂ: ಅವರ ಕಾದಂಬರಿ ಓದಿದ ವಿದ್ಯಾವಂತ ಒಕ್ಕಲಿಗರ ಪ್ರತಿಕ್ರಿಯೆ?

ಶಾ: ಈ 'ಕಾನೂರು ಸುಬ್ಬಮ್ಮ ಹೆಗ್ಗಡತಿ'ಲಿ ಸುಬ್ಬಮ್ಮ ಸೇರೆಗಾರರ ಸಹವಾಸ ಮಾಡಿದ್ದು ಈ ರೀತಿಯಾದಂಥವೆಲ್ಲ ಇದ್ವಲ್ಲ, ಇದಕ್ಕೆ ಒಂದು ವರ್ಗ ಪ್ರತಿಭಟನೆಯನ್ನು ತೋರಿಸ್ತು. ಆದರೆ ಅವರ ಸಂಖ್ಯೆ ಬಹಳ ಕಡಿಮೆಯಾದ್ರಿಂದ ಏನ್ ಮಾಡಕಾಗ್ಲಿಲ್ಲ.

ಸಂ: ಕುವೆಂಪು ಕಾದಂಬರಿಗಳಲ್ಲಿ ಆಗಿನ ಮಲೆನಾಡಿನಲ್ಲಿ ಶಾಲೆಗಳಲ್ಲಿ ಸಾಮಾಜಿಕ ಭೇದಭಾವದ ಚಿತ್ರ ಇದೆ. ಅದು ನಿಮ್ಮ ಕಾಲದಲ್ಲಿ ಏನಾದರೂ ಬದಲಾಗಿತ್ತಾ?

ಶಾ: ಬದಲಾವಣೆ ಆಗಷ್ಟೆ ನಮ್ಮಲ್ಲಿ ಶುರುವಾಗಿತ್ತು - ದಲಿತ್ರು ಬರ್ಬೇಕು, ಅವ್ರು ನಾವೆಲ್ಲ ಒಟ್ಟಿಗೇ ಕೂತ್ಕೋಬೇಕು. ಅವ್ರನ್ ಹಿಂದುಕ್ ಕುತ್ಕೋಳದುಕ್ಕೆ ಬಿಡಬಾರ್ದು. ಅವರ ಜೊತೆ ಸೇರ್ಕೋಬೇಕು ಇದೆಲ್ಲಾ..

ಸಂ: ಇದೆಲ್ಲ ಯಾವ ಇಸ್ವಿಯಲ್ಲಿ?

ಶಾ: ಇಸ್ವಿ? ಎಲ್ಲ ಮರ್ತೋಗಿದೆ. ನನಗ್ ಈ ಇಸ್ವಿಯೊಂದ್ ನೆನಪಿರೂದಿಲ್ಲ ಮಾರಾಯ್ರ.

ಸಂ: ನಿಮ್ಮ ಬಾಲ್ಯದ ಯಾವ ಸಂಗತಿಗಳು ಈಗಲೂ ನೆನಪಲ್ಲಿ ಗಾಢವಾಗಿ ಉಳಿದಿವೆ?

ಶಾ: ಬಾಲ್ಯದ ದಿನಗಳು ಹೆಚ್ಚು ನೆನಪಿರೋದಂದ್ರೆ, ಮಿಡ್ಲ್‌ಸ್ಕೂಲ್ ಹೈಸ್ಕೂಲ್ ದಿನಗಳು ಕಂಡ್ರಿ. ಅದೆಲ್ಲ ಆ ಹೊಂಗರವಳ್ಳೀಲೆ ಕಳೆದಿರೋದ್ ನಾನು. ಆಗ ನನ್ನನ್ನ ಅಣ್ಣಯ್ಯಹೆಗ್ಗಡೆಯವರು ಅವ್ರೂರ ಮನೇಲಿ ತೊಗೊಂಡೋಗಿ ಬಿಟ್ಟಿದ್ರು. ಓದದು ಕೊಣ್ಣೂರ. ಸುಮಾರು ನಾಲ್ಕು ಕಿಲೋಮೀಟರ್ ಪ್ರತಿದಿನಾ ನಡದು ಶಾಲೆಗ್ ಬರಬೇಕಾಗಿತ್ತು. ಏನುಮಾಡ್ತ, ಅದಾಕ್ ಹೆದ್ರಂಗೆ ಮುಂಚೆ.. (ನಗುತ್ತಾ) ನಮ್ ಜೊತೆಗೆ ಬಂದೆಲ್ಲ ಮೂರ್ ಜನ ಹೆಣ್ಮಕ್ಳು ಇರ್ತಿದ್ರು. ಗಂಡ್ಮಕ್ಳು ಇರ್ತಿದ್ರು. ಒಂದೊಂದಾ

ಜನದ್ ಟೇಮು. ಬಾಳ ಖುಷಿ ಇರ್ತಿತ್ತು ಜೀವನ. ದಾರಿಯುದ್ದಕ್ಕೂ ಖರ್ಜೂರದಣ್ಣು, ಮಾವಿನ್ ಹಣ್ಣು, ಜೆಂಬರ್ಲಹಣ್ಣು... ಯಾವ್ಯಾವ್ ಹಣ್ಣು ಯಾವ್ಯಾವ್ ಸೀಸನಲ್ಲಿ ಸಿಕ್ತದೆ ಅನ್ನೋದ್ ಅಷ್ಟು ಚೆನ್ನಾಗ್ ಗೊತ್ತಿರೋದ್ ನಮಗೆ. ಆಮೇಲ್ ಹಳ್ಳದಲ್ಲಿ ಗಾಳ ಹಾಕ್ಕೊಂಡು ಏಡಿ ಹಿಡಿಯೋದು, ಮೀನು ಹಿಡಿಯೋದು. ಓದೋದು ಅಂದ್ರೆ ಸುಮ್ನೆ ಒಂದ್ ನೆಪ. ಇಂಥವೇ ಜಾಸ್ತಿ. ಸ್ಕೂಲಿಗೆ ಹೋಗ್ತಿದ್ರೆ ಬೈತಿದ್ರಲ್ಲಾ, ಹೋಗ್ತಿದ್ವಿ. ಕ್ಲಾಸಲ್ ಕರೆಕ್ಟಾಗ್ ಕೇಳ್ತಿದ್ವಿ, ಹಂಗಾಗಿ ಪಾಸೊಂದ್ ಮಾಡಿಬಿಡ್ತಿದ್ವಿ.

ಸಂ: ಸ್ಕೂಲಿನ ಒಳಗೆ ಖುಶಿ ಇರಲಿಲ್ಲವಾ?

ಶಾ: ಸ್ಕೂಲೂ ಖುಶಿ ಕೊಡೋದು. ಎಲ್ಲೋ ಒಬ್ಬಿಬ್ರು ಗೊಡ್ಡುಮೇಷ್ಟ್ರು ಬಿಟ್ರೆ, ನಾವು ಸೈನ್ಸ್ ಕೇಳಾಕ್ ಹೋದ್ರೆ, 'ಏಯ್ ನಿಮ್ಮಂಥ ದಡ್ಡಗೌಡರಿಗೆಲ್ಲ ಸೈನ್ಸ್ ಎಂತಕೋ' ಅಂತ ಸಿಟ್ ಬರಸಿ ಸಿಂಗಾರ ಮಾಡಿದ ಒಂಚೂರ್ ಕಹಿ ಅನುಭವ ಬಿಟ್ರೆ, ನಮ್ ಅದೃಷ್ಟಕ್ಕೆ ಎಂತೆಂಥಾ ಮೇಷ್ಟ್ರು ಇದ್ರೂ ಅಂತೀರಾ? ಒಬ್ರು ವೆಂಕಟಶಾಂರಾವ್ ಅಂತ ಇದ್ರು. ಹಿಂದೀ ಪಾಠ ಮಾಡ್ತಿದ್ರು. ಹಿಂದೀಪದ್ಯ ಹೇಳೋಹೊತ್ತಿಗೆ, ಆ 'ಟುವ್ವಿ ಟುವ್ವಿ' ಅನ್ನೋ ಪದ್ಯಾನ, ಸ್ವಾತಂತ್ರ್ಯ ಗೀತೆಗಳನ್ನ, ಬೇಂದ್ರೆಯವರ ಗೀತೆಗಳನ್ನ, ಕನ್ನಡದ ಎಲ್ಲಾ ಪದ್ಯಗಳನ್ನ ಹೇಳ್ಬಿಡೋರು. ನನಗೆ ಹೇಳ್ಕೊಟ್ಟ ಪುಟ್ಟಪ್ಪನೋರ ಒಂದುಹಾಡು ಈಗಲೂ ಹೇಳಬಲ್ಲೆ ಬೇಕಾರೆ. ಕಾಮನ್ ಬಿಲ್ ಮೇಲೆ ಒಂದ್ ಪದ್ಯ ಇದೆ ನೋಡಿ.. (ರಾಗದಲ್ಲಿ ಹಾಡುತ್ತಾ) 'ನೋಡಲ್ಲಿ ಮೂಡಿಹುದು ಮುಗಿಲಿನಲಿ ಮಳೆಬಿಲ್ಲು..' ; ಹೇಳ್ತೀನಲ್ಲ, ಹೈಸ್ಕೂಲಿನ ಆ ಮೂರು ವರ್ಷದಲ್ಲಿ ಕನ್ನಡದ ಸುಮಾರಷ್ಟು ಕವಿಗಳನ್ನ, ಅಡಿಗರನ್ನ ನವ್ಯ ಕವಿಗಳಂತ ಸೀವೇಸ್ ಹೇಳ್ತೀರಿ ಇವರನ್ನೊಂದಷ್ಟ್ ಜನಾನ್ನ ಬಿಟ್ಟು, ಉಳಿದೋರ ಮೇಲೆಲ್ಲಾ ಹುಚ್ ಹಚ್ಚಿಸಿಬಿಟ್ಟಿದ್ರು ಆ ಪಂಡಿತ್ರು. ಬೇಂದ್ರೆಯವರ 'ಕುಣಿಯೋಣು ಬಾರಾ' ಪದ್ಯ ಹೇಳಿ, ಜೇಬಲ್ಲಿ ಅನಾವಶ್ಯಕವಾಗಿ ನಾಕ್ ರುಪಾಯ್ ಇದ್ರೆ ನಮ್ಮನ್ನ ಹೆಂಗೆ ಕುಣಸ್ತದೆ ಅನ್ನೋದನ್ನ ಅವರು ಅವರು ಎಷ್ಟ್ ಚೆನ್ನಾಗ್ ಇಂಪ್ರೆಸ್ ಮಾಡಿದ್ರು ಅಂದ್ರೆ, ಇವತ್ತಿಗೂ ಮರೆಯಕ್ಕಾಗಿಲ್ಲ.

ಸಂ: ಇಷ್ಟೊಂದು ಸಾಹಿತ್ಯಾನ ಹಚ್ಚಿಕೊಂಡಿದ್ದ ನೀವು, ಆಮೇಲೆ ಸಮಾಜಶಾಸ್ತ್ರ ತಗೊಂಡ್ರಿ. ಯಾಕೆ?

ಶಾ: ಕನ್ನಡಾನ ಬಿಟ್ಟು ಸೋಶಿಯಾಲಜೀನ್ನ ತೊಗೊಂಡಿದ್ದಕ್ಕೆ ಕಾರಣ, ನಮ್ಮ ಹಳ್ಳಿಗಳೆ ಅನ್ನುತ್ತೆ. ಯಾವುದೇ ಒಂದು ಹಳ್ಳೀ ತಗೊಳ್ಳಿ. ಕೊನೇಕೇರಿಲಿ ಅತ್ಯಂತ ಕನಿಷ್ಠದವನು ಇರೋದು. ಅದಾದಕೂಡ್ಲೆ ಇನ್ನೊಬ್ಬ, ಅದಾದಕೂಡ್ಲೆ ಇನ್ನೊಬ್ಬ, ಇನ್ನೊಬ್ಬ, ಉತ್ತಮನಾದೋನು ಕೊನೀಗೆ. ಇದರ ಮುಖಾಂತರ ಹೆಂಗೆ ಶೋಷಣೆ ನಡೀತದೆ? ಆ ಕೊನೆಯವನು ಪಾಪ ಬಚ್ಚಲು ಗುಂಡೀಲಿದಾನೆ ಅವನು. ಇವರೆಲ್ಲಾ ಕಕ್ಸಿ ಮಾಡಾಕ್ ಹೋಗೋದು ಅಲ್ಲಿಗೆ, ಅಲ್ಲಿ ಅಂವ್ನ ಬದುಕಬೇಕು. ಇದು ಹುಡುಗರಾಗಿದ್ದೋರಿಗೆ ಎಷ್ಟ್ ಚೆನ್ನಾಗ್ ಅರ್ಥಾಗ್ತದ ಗೊತ್ತಾ? 'ಯಾಕಿದು'? ಹ್ಯಾಂಗ್ ಬದಲಾವಣೆ ಆಗ್ಬೇಕು ಇದು?' ಅಂತ್ಹೇಳಿ, ಹಠದಿಂದ ನಾವು ಹೋಗಿ ಅವರ ಮನೆಯೊಳಾಗ್ ಕುತ್ಕೊಂಡು

ನಾವು ಮಾಡ್ತಿದ್ದೆವು. 'ಅಲ್ಲೇ ಹೋಗಿ ಯಾಕಾಗಬಾರ್ದು ನೋಡಣ' ಅಂತ್ಹೇಳಿ ಅವರ ಜೊತೇಲಿ ಬರ್ತಿದ್ದೆವು. ಇಲ್ಲಿಂದ್ ಪ್ರಾರಂಭವಾಯ್ತು ನೋಡಿ ನಮಗೆ ಸಮಾಜವಾದದ ಪಾಠ.

ಸಂ: ಇಂಥಾ ಆಲೋಚನೆಗಳು ಹುಟ್ಟೋದಕ್ಕೆ ಗೋಪಾಲಗೌಡರ ಪ್ರೇರಣೆ ಇತ್ತಾ?

ಶಾ: ಖಂಡಿತಾ ಹೌದು. ಯಾಕೆಂದ್ರೆ, ಗೋಪಾಲ್ ಗೌಡರ ಎಲೆಕ್ಷನ್ ಭಾಷಣಗಳನ್ನ ಕೇಳಿ ತುಂಬ ಪ್ರಭಾವಕ್ಕೊಳಗಾದವರಲ್ಲಿ ನಾನೂ ಒಬ್ಬ. ಗೋಪಾಲ್ ಗೌಡ್ರು ಓಟ್ ಕೊಡಿ ಅಂತ ಕೇಳ್ತಿರ್ಲಿಲ್ಲ ಕಂಡ್ರಿ. ಇವ್ರು ಎಂತೆಂಥವ್ರೊ ಕತೆ ಹೇಳೋರು.

ಸಂ: ಮಲೆನಾಡಿನಲ್ಲಿ ಕಾಗೋಡು ಸತ್ಯಾಗ್ರಹಕ್ಕೆ ಕಾರಣವಾದ ಗೇಣಿದಾರರ ಸಮಸ್ಯೆ ನಿಮ್ಮೂರಲ್ಲಿ ಹ್ಯಾಗಿತ್ತು?

ಶಾ: ನಮ್ಮನೇ ಒಳಗೇ ಗೇಣಿ ಅಳಸ್ತಾ ಇದ್ರು! ನನಗೆ ನಮ್ಮಪ್ಪ 'ಅಲ್ಹೋಗಿ ಬತ್ತ ಅಳಸಕೊಂಬಾ. ಇಲ್ಹೋಗಿ ಅಡಕೆ ಅಳಸ್ಕೊಂಬಾ' ಅಂತ ಕಳಸೋರು. ಹಾಗಾಗ್ ಹೋದಾಗೆಲ್ಲಾ ಕಹಿ ಅನುಭವವೇ ಕಂಡ್ರಿ. ನಮ್ಮಪ್ಪನ ಜತೆಗಂತೂ 'ನಾ ಇನ್ ಹೋಗಲ್ಲ. ಶೋಷಣೆ ಇದು. ಒಳ್ಳೇದಲ್ಲ ಇದು. ಅರೆ! ಗದ್ದೆ ಮಾಡೋನು ಅವ್ನು. ಗೋಪಾಲ್ ಗೌಡ್ರು ಹೇಳೋದರಲ್ಲಿ ತಪ್ಪೇನಿದೆ? ಇವತ್ತಲ್ಲ ನಾಳೆ ಯಾವತ್ತಿದ್ರೂ ಘರ್ಷಣೆ ಆಗ್ತದೆ. ಬಿಟ್ಬಿಡಿ ಇದ್ನ' ಅಂತ ಜಗಳ ಮಾಡ್ತಿದ್ದೆ ನಾನು. ಕೊನೀಗ್ ಸುಮಾರು ಜಮೀನನ್ನ ಬಿಟ್ರು ನಮ್ ತಂದೆ.

ಸಂ: ಸತ್ಯಾಗ್ರಹದ ಬಿಸಿ ಶುರುವಾಗಿತ್ತಾ ಆಗಲೇ?

ಶಾ: ಕಾಗೋಡು ಸತ್ಯಾಗ್ರಹದ ಸಂದರ್ಭಾನೆ ಇದು. ಕಡಿದಾಳ್ರು ಬೇರೆ ಇದ್ರಲ್ಲ ಅಲ್ಲಿ. ಅವ್ರೂ ಈ ಗೇಣಿದಾರರ ಸುಧಾರಣೆ ಆಗ್ಬೇಕು ಅನ್ನೋರು.

ಸಂ: ಅವರಿನ್ನೂ ಮುಖ್ಯಮಂತ್ರಿ ಆಗಿರಲಿಲ್ಲಾ?

ಶಾ: ಇಲ್ಲ. ಇನ್ನೂ ಆಗಿರ್ಲಿಲ್ಲ. ಅವರು ನಮಗೆ ದೊಡ್ಡಪ್ಪ ಬೇರೆ. ಅವರು ನಮ್ಮೂರಲ್ಲಿ ಎಲ್ಲರನ್ನ ಕರದು 'ಇದು ನ್ಯಾಯವೇನ್ರೋ? ನೀವು ಇದರ ವಿರುದ್ಧ ನಿಲ್ಬೇಕಾದ್ರೆ. ಇದುನ್ ಅರ್ಥ ಮಾಡ್ಕೊಬೇಕು. ಏನಿದೆ ಅದ್ರಲ್ಲಿ? ಯಾವತ್ತಿದ್ರೂ ಬಿಟ್ಕೊಡಬೇಕು' ಅಂತ ತಣ್ಣಗೆ ಹೇಳೋರು. ಗೇಣಿಭೂಮಿ ಬಿಟ್ರೆ ಅವರಿಗೂ ಏನೂ ಇರಲಿಲ್ಲ!

ಸಂ: ಸೋಶಿಯಲಿಸ್ಟರನ್ನು ಕುರಿತು ಅವರ ನಿಲುವು ಹೆಂಗಿತ್ತು?

ಶಾ: ಅವರು ಕಾಂಗ್ರೆಸ್ಸಿನಲ್ಲಿದ್ದವರು. ಸೋಶಿಯಲಿಸ್ಟ್ ಪಾರ್ಟಿಗೆ ಸೇರೋಕ್ ತಯಾರಿರಲಿಲ್ಲ. ನಮಗೆ ಕರಕರದು ಬಯ್ಯೋರು: 'ನಿಮ್ಗ್ಯಾಕೊ ಕಾಂಗ್ರೆಸ್ ಆಗ್ಲಿಲ್ಲ.' ಅದೆಂಥದೋ. ಈ ಬೀಡಿಸೇದ್ಕೊಂಡು ಹಂಗ ಕುಂತ್ಕೊಂಡು ಇರೋರತ್ರ ಹೋಕ್ಕಂಡು ಇರ್ತೀರಲ್ಲ' ಅನ್ನೋರು. ಆವಾಗ ನಮಗೆ 'ಈ ಕಾಂಗ್ರೆಸು ಅಂದ್ರೆ, ಪ್ರವಾಹದ ಜೊತೇಲಿ ಹೋಗೋ ಪಕ್ಷ. ಈ ಸೋಶಿಯಲಿಸ್ಟ್ ಪಾರ್ಟಿ ಪ್ರವಾಹದ ವಿರುದ್ಧ ಈಜುವಂತಹದು. ವಿರುದ್ಧ ಈಜೋವರಲ್ಲೇ ಮಜಾ ಇರೋದು' ಅಂತನ್ನಿಸೋದು.

ಸಂ: ಗೋಪಾಲಗೌಡರ ಜತೆಗಿನ ನಿಮ್ಮ ಒಡನಾಡ ಹೇಳಿ ಶಾಮಣ್ಣಾ.

ಶಾ: ಗೋಪಾಲ್ ಗೌಡ್ರ ಜೊತೇಲಿ ಇರೋದೇ ಬಹಳ ಖುಷಿ ಕಂಡ್ರಿ. ನನಗೆ ಎಷ್ಟು ಪರಿಣಾಮ ಆಗಿತ್ತಂದ್ರೆ, ಅವರ ಕೊನೇದಿನಗಳಲ್ಲಿ ತೀರ್ಥಳ್ಳಿಗೆ ಬಂದಿದ್ರು. ಬಂದಾಗ, ನಮ್ಮನೆಗೆ ನೀವು ಊಟುಕ್ ಬರ್ಬೇಕು ಅಂತಂದ್ ಕರ್ಕೊಂಡ್ ಹೋಗಿದ್ದೆ ಅವರನ್ನ, ಒಂದ್ ಸಣ್ಣಕಾರಲ್ಲಿ, ಮಾರುತಿ ೮೦೦೦೦ ಅಂತ. ದಾರೀಲಿ ಹೋಗ್ತಾ 'ಏ ಈ ಕಾರಿಗೆ ಎಷ್ಟಾಗ್ತದೆ?' ಅಂತ್ ಕೇಳಿದ್ರು. 'ನಿಮಿಗೆಂತಕ್ಕೆ ಸಮಾಜವಾದಿಗಳಿಗೆ ಕಾರು?' ಅಂತಂದೆ ನಾನು. 'ಏ ಹಂಗಲ್ಲ ಕಣೊ, ಎಲ್ಲಿಗಾರು ಹೋಗೋದಾದ್ರೆ ಬೇರೆಯವರನ್ನ ಕೇಳಿಕೇಳಿ ಸಾಕಾಗ್ ಹೋಗಿದೆ. ನಮ್ದು ಅಂತ ಒಂದು ಇಟ್ಕೊಂಡಿದ್ರೆ ಒಳ್ಳೇದಿತ್ತು' ಅಂತಂದ್ರು. ಪಾಪ, ಅವರ ಆರೋಗ್ಯ ಸರಿಯಿರಲಿಲ್ಲ ಆವಾಗ. ನಾನು ಎಷ್ಟ್ ಖರ್ಚ್ ಬರ್ತದೆ ಅಂತೆಲ್ಲ ಹೇಳಿದ್ಮೇಲೆ 'ಏ.. ಬ್ಯಾಡಾ ಮಾರಾಯಾ, ಇದೆಲ್ಲಾ ಆಗೋದಲ್ಲ. ಇಷ್ಟ್ ದಿನಾನೇ ಇಲ್ಲಂತೆ, ಇನ್ನ್ಯಾಕ್ ಇಟ್ಕಳ್ಳೋದು' ಅಂದ್ರು. ಹಂಗಂದಾಗ ನನಿಗೆ ಒಂಥರಾ ಅನಿಸ್ಬಿಡ್ತು. 'ಛೇ, ಒಬ್ ಮನುಷ್ಯ ಇಷ್ಟೆಲ್ಲ ಹೋರಾಟ ಮಾಡಿ ಎಲ್ಲಾ ಮಾಡಿ, ಕಡೆಗೂ ತನ್ನ ಅವಶ್ಯಕತೆಗಾಗಿ ತಗೊಬೇಕಂದ್ರೂನು ಆಗದೆ ಹೋಯ್ತಲ್ಲಾ, ಪಾಪ' ಅಂತೆಲ್ಲಾ ಅನಿಸ್ಬಿಡ್ತು. ಜತಿಗೆ ನನಿಗೆ ಗೋಪಾಲ್ ಗೌಡ್ರು ಹೊಸಾಬಟ್ಟೆ ತಂದು ಹೊಲಿಸ್ತಿರ್ಲಿಲ್ಲ ಅನ್ನೋದು ಗೊತ್ತಾಗಿದ್ ಆವಾಗ್ಲೆ. ನಾನೇನಂದೆ 'ಈ ರೀತಿ ಜುಬ್ಬಾನ ಎಲ್ಲಿ ಹೊಲಿಸ್ತೀರಿ, ಚೆನ್ನಾಗಿದೆ, ನಾನೂ ಹೊಲಿಸಬೇಕು' . 'ನಾನೆಲ್ಲಿ ಹೊಲಿಸೋದೋ? ಯಾರಾದ್ರು ರೆಡಿಮೇಡು ತಂದು ಕೊಡ್ಬೇಕು ನನಿಗೆ, ಅವು ಉದ್ದ ಇರ್ತಾವ್ ನೋಡು, ಅದಿಕ್ಕೆ ನಾನು ಹಿಂಗೆ ಮಡಚೋದು, ಶೋಕಿ ಅಂತ ತಿಳಿಬ್ಯಾಡ' ಅಂದ್ರು. ಅವಾಗ್ ನನಗನಿಸ್ತು 'ಹೌದಪ್ಪ ನಾವು ಇದ್ರೆ ಇಷ್ಟೆ ಸರಳವಾಗಿರ್ಬೇಕು' . ಇವೆಲ್ಲ ಬಹಳ ಮುಖ್ಯ ವ್ಯಕ್ತಿತ್ವ ಬೆಳೆಸಿಕೊಳ್ಳೋಕೆ; ಇದು ಆ ಹುಡುಗ ವಯಸ್ಸ್ ನಲ್ಲಿ ಬಹಳ ಪರಿಣಾಮ ಮಾಡ್ತು.

ಸಂ: ಶಿವಮೊಗ್ಗಕ್ಕೆ ಲೋಹಿಯಾ ಬಂದಿದ್ದು ನಿಮಗೆ ಗೊತ್ತಿದೆಯಾ?

ಶಾ: ಓ, ಗೊತ್ತಿಲ್ದೇ ಏನು? ಆವಾಗ ನಾನು ಹೈಸ್ಕೂಲ್ ಮುಗ್ಸಿ ಯಾವದೋ ಸೇವಾದಳದ್ದು ಟ್ರೈನಿಂಗು ಅಂತ ಬಂದಿದ್ದೆ ಶಿಮೊಗ್ಗಕ್ಕೆ. ಶಿಮೊಗ್ಗದಾಗ್ ಅವರು ಅರೆಸ್ಟಾಗಿದ್ದು, ಅರೆಸ್ಟಾಗಿ ರೈಲ್ವೇ ಸ್ಟೇಶನ್‌ಗೆ ಹೋಗಿದ್ದು, ಇದೆಲ್ಲ ನೆನಪಿದೆ ನನಗೆ.

ಸಂ: ನಿಮಗೆ ಸಮಾಜವಾದಿ ಸಂಪರ್ಕವೆಲ್ಲ ಬಂದಿದ್ದು ಈ ಶಿವಮೊಗ್ಗಕ್ ಬಂದ್ಮೇಲೇನೆ?

ಶಾ: ಇಲ್ಲಾ, ನಾನು ಮೇಗರಳ್ಳೀಲಿ ಹೈಸ್ಕೂಲಲ್ಲಿ ಓದ್ತಾ ಇದ್ದೆ ಅಂತ ಹೇಳಿದ್ನಲ್ಲ, ಆವಾಗಲೇ ಈ ಗೇಣಿ ವಿವಾದ ನಡೀತಾ ಇತ್ತು. ಒಂದಿನ ಅಣ್ಣಯ್ಯಹೆಗ್ಗಡೆಯೋರು ನಾನು ಯಾರ ಮನೇಲಿ ಓದ್ತಾ ಇದ್ನಲ್ಲಾ ಅವರು, 'ಬತ್ತ ಅಳಸ್ಕೊಂಬಾ' ಅಂತ ಒಬ್ಬ ಭಟ್ರು ಮನೆಗೆ ಕಳಸಿದ್ರು ನನ್ನನ್ನ. ಆ ಭಟ್ರು ಮನೆಗೆ ಹೋದರೆ, ಅಷ್ಟ್ ಬತ್ತ ಕೊಡೋಕ್ ಅವ್ರಿಗ್ ಶಕ್ತಿ ಇಲ್ಲ. ಹಳೇ ಬಾಕೀನೆ ಇತ್ತು ಅವ್ರಿಗೆ. 'ಕೊಡೋಕಾಗಲ್ಲ' ಅಂತ

ಅವರು. ಅಣ್ಣಯ್ಯ ಹೆಗ್ಗಡೇರು 'ಇನ್ ವಸೂಲ್ ಮಾಡ್ಬಂದೇ ಬರ್ಬೇಕು. ಗಾಡಿ ತೊಗೊಂಡ್ಹೋಗು' ಅಂತ ಮತ್ತೆ ಕಳ್ಸಿದ್ರು ನನಗೆ. ಗಾಡಿ ತಕ್ಕೊಂಡ್ ಜಾನ್ ಕಕರ್ಬಾಡ್ ಮತ್ತೆ ಭಟ್ಟರ ಮನೆಗೆ ಹೋದೆ. ಆಗ ನನ್ ಕ್ಲಾಸಲ್ಲಿ ಓದ್ತಿರೋ ಹುಡಗಿ ಇದ್ಲು ಅಲ್ಲಿ. ಅವಳು 'ಇಲ್ಲ ಇವತ್ತು ಅವರು. ಎತ್ಲಾಗೋ ಹೋಗಿದಾರೆ' ಅಂತ ಹೇಳಿದ್ಲು.

ಸ: ಆಕೆ ಸುಳ್ಳು ಹೇಳಿದ್ರಾ?

ಶಾ: ಇಲ್ಲ, ಸುಳ್ಳಲ್ಲ. ಕ್ಲಾಸ್ ಮೇಟ್ ನಾನು. ಇನ್ನೊಬ್ಬರ ಪರವಾಗಿ ವಸೂಲಿಗೆ ಹೋಗಿದೀನಿ. ನನಗೆ ಸುಳ್ ಹೇಳ್ಬೇಕಾದ ಅವಶ್ಯಕತೆ ಅವಳಿಗೆ ಇರಲಿಲ್ಲ. ಮನಸ್ ಬಿಚ್ಚಿ ಅವಳು ಹೇಳಿದ್ಲು. ನನಗೆ ಚೆನ್ನಾಗಿ ನೆನಪಿದೆ: 'ಎಷ್ಟಂತ ಕೊಡ್ತಾರೆ ಗೇಣೀನಾ? ನ್ಯಾಯವಾಗ್ ಕೊಡಬೇಕಾದ್ ಕೊಟ್ರೂನೂ ಪ್ರತೀಸಾರಿ ಎಕ್ಸ್ಟ್ರಾ ಲೆಕ್ಕ ಬರ್ದಿಟ್ಕೊಂಡು ವಸೂಲ್ ಮಾಡ್ತಾರೆ ಇವ್ರು. ನೀವ್ನೋಗ್ ನೋಡು ಬೇಕಾದ್ರೆ' ಅಂದ್ಲು. ನನಗೆ ತುಂಬ ಮನಸಿನ ಮೇಲೆ ಪರಿಣಾಮ ಆಗಿ, ಮನೀಗ್ ಬಂದು ಅಣ್ಣಯ್ಯ ಹೆಗ್ಗಡೇರಿಗೆ ಹೇಳ್ದೆ. 'ಇನ್ ನಾ ವಸೂಲಿ ಮಾಡಾಕ್ ಹೋಗಲ್ಲ. ಆ ಹುಡಗಿ ಹಿಂಗ್ ಹೇಳ್ತು' ಅಂತಂದ್ಮೇಲೆ ಅವ್ರಿಗೂ ಪರಿಣಾಮ ಆಗಿ, 'ಹೋಗ್ಲಿ ಬಿಡತ್ಲಾಗೆ ಬ್ಯಾಡ' ಅಂತ ಬಿಟ್ಬಿಟ್ರು.

ಸ: ಬ್ರಾಹ್ಮಣರಲ್ಲೂ ಗೇಣಿದಾರರು ಇದ್ರಾ ಶಾಮಣ್ಣಾ? ಅವರೂ ಒಕ್ಕಲಿಗರೂ ಸಾಮಾನ್ಯವಾಗಿ ಜಮೀನ್ದಾರರಾಗಿದ್ರು ಅಂತ ಓದಿದೀವಿ.

ಶಾ: ಬೇರೆಯವರಿಗೆ ಜಮೀನು ಕೊಟ್ಟು ಗೇಣಿವಸೂಲು ಮಾಡ್ತಾ ಇದ್ದಿದ್ದು ಹೆಚ್ಚಾಗಿ ಬ್ರಾಮಣ್ರೆ. ಅವರಿರೋದು ಪೇಟೆ. ಉದಾಹರಣೆ ಅಂತಂದ್ರೆ ಅಲ್ಲೇ ಮೇಗರವಳ್ಳೀಲಿ ಸೀರನಳ್ಳಿ ಅಂತ ಒಂದ್ ಊರಿತ್ತು. ಅಲ್ಲಿನ ಎಲ್ಲ ಬ್ರಾಮಣ್ರು ಗೇಣಿಗೆ ಕೊಟ್ಟು ಶಿವಮೊಗ್ಗದಲ್ಲಿದ್ರು.

ಸ: ನಿಮ್ಮ ತಲೆಮಾರಿನವರಿಗೆ ವೈಚಾರಿಕ ವ್ಯಕ್ತಿತ್ವ ಕಟ್ಟಿಕೊಳ್ಳಲು ಇನ್ನೂ ಯಾವ್ಯಾವ ಪ್ರಭಾವಗಳಿದ್ದವು?

ಶಾ: ನನಗೆ ಅನ್ಸುತ್ತೆ, ಸೋಷಿಯಲಿಸ್ಟ್ ಪಾರ್ಟಿಯೇ ನಮ್ಮೆಲ್ಲರಿಗೂನೂ ಗಟ್ಟಿಯಾಗಿ ಆ ದಿಕ್ಕಲ್ಲಿ ಕೆಲ್ಸ ಮಾಡೋಂಗೆ ಮಾಡಿದ್ದು. ಆದರೆ ಇದು ಮಾತ್ರ ಅಲ್ಲ. ಸರಳ ವಿವಾಹದ ಬಗ್ಗೆ ಕುವೆಂಪುರವರು ಹೇಳ್ತಾ ಇದ್ರಂತದ್ದು, ಆಮೇಲೆ ವಿವೇಕಾನಂದರ ಆಲೋಚನೆಗಳು...

ಸ: ಕುವೆಂಪು ಅವರಿಗೂ ಲೋಹಿಯಾ ಅವರಿಗೂ ಏನಾದರೂ ಸಂಪರ್ಕ ಏರ್ಪಟ್ಟಿತ್ತಾ?

ಶಾ: ಹೌದು, ಲೋಹಿಯಾ ಅವರು ಮನೀಗ್ ಬಂದು ಹೋಗಿ ಅವ್ರತ್ರ ಮಾತಾಡಿ ಹೋಗಿದ್ರು ಅಂತ ಕೇಳಿದೀನಿ.

ಸ: ನಿಮ್ಮ ಕಾಲದ ಸೋಷಿಯಲಿಸ್ಟ್ ಪಾರ್ಟಿಯ ಕೆಲಸಗಳು ನೋಡಿದ್ರೆ ಗೌರವ ಬರುತ್ತೆ. ಆದರೆ ಆಮೇಲಾಗಿದ್ದು ಬೇರೆ. ಹೆಚ್ಚಿನವರು ಚಳುವಳಿ ಬಿಟ್ಟು ಬೇರೆಬೇರೆ ಪಕ್ಷ ಸೇರಿಕೊಂಡು ವಿಘಟಿತರಾದರು. ಈ ಪಲ್ಲಟಗಳಿಗೆ ಕಾರಣ ಎಲ್ಲಿದೆ ಅಂತೀರಿ? ತತ್ವದಲ್ಲೇ?

ಶಾ: ತತ್ವದಲ್ಲಿ ಹ್ಯಂಗಿರೋಕಾಗ್ತದೆ? ತತ್ವದಲ್ಲಿದೆ ಅಂತ ಅನಿಸೋದಿಲ್ಲ. ನಿಜ, ಹೆಚ್ಚಿನೋರು ಅವಕಾಶವಾದಿಗಳಾಗಿ ಕಾಂಗ್ರೆಸ್‌ನಲ್ಲಿ ಸೇರಿಹೋದರು. ಅಲ್ಲದೆ ಯಾವ್ದೂ ಬಹಳ ವರ್ಷ ಇರಲ್ಲ. ಚರಿತ್ರೆಯ ತಿರುಗು ಚಕ್ರಗಳಲ್ಲಿ ಜನ ಹಳತು ಅಂತ ಅನಿಸಿದ್ದನ್ನ ಬಿಟ್ಬಿ ಬೇರೆ ಹೊಸತು ರೂಪ್ಸಿಕೋತಾರೆ. ಮೂಲ ಸಿದ್ಧಾಂತದಲ್ಲಿ ಐಬು ಇದ್ದು ಹಿಂಗೆಲ್ಲ ಆಗ್ತಿರೋದಲ್ಲ. ಗೋಪಾಲ್ ಗೌಡ್ರು 'ನೀನೊಂದು ಒಂದ್ ನೋಟು, ಒಂದ್ ಓಟು ಕೊಡ್ಬೇಕು. ಚುನಾವಣೆಗೆ ಹಾಕಾಕೆ ನನ್ಹತ್ರ ದುಡ್ಡಿಲ್ಲ' ಅಂತ ಹೇಳ್ತಿದ್ರು. ಅವತ್ತಿನ್ ದಿನ ಎರಡೇ ಸಾವಿರ ರೂಪಾಯ್ ಚುನಾವಣೆಗೆ ಸಾಕಾಗ್ತಿತ್ತು. ಆಗ ಅವರ ಸ್ಲೋಗನ್ ಸರಿಯಿತ್ತು. ಲಕ್ಷಾಂತರ ರೂಪಾಯಿ ಬೇಕು ಇವತ್ತು. ಇವತ್ತು ನಾವು ಚುನಾವಣೆ ಮಾಡ್ತೀವಿ ಅಂದ್ರೂ ಒಂದೇ, ಮಾಡಲ್ಲ ಅಂದ್ರೂ ಒಂದೇ.

ಸಂ: ಶಾಮಣ್ಣಾ, ಕಾಲೇಜಲ್ಲಿ ನಿಮ್ಮ ಮೇಷ್ಟ್ರುಗಳು ಯಾರ್‍ಯಾರು?

ಶಾ: ಇಂಟರಮಿಟಿಯಟ್ಟನಲ್ಲಿ ನನಿಗೆ ಅನಂತ್ ಮೂರ್ತಿಯವರು ಮೇಷ್ಟ್ರಾಗಿದ್ರು. ನಾನ್ ಡಿಟೇಲ್ ಆಗಿ ಮಹಾಭಾರತ ತೊಗೊಂತಿದ್ರು. ಭಾಳ ಖುಶಿಯಾಗಿರೋದು... (ನಗು) ಅವರೇನ್ ಮಾಡ್ತಿದ್ರಂದ್ರೆ ಟೆಕ್ಸ್ಟ್ ಹೇಳೋದು ಮಾತ್ರ ಅಲ್ಲ, ಅದ್ರಾಚೆಗೂ ಹೇಳೋರು; ಹುಡುಗುರನೆಲ್ಲ, 'ಏಯ್ ಇಲ್ ಬಾರೋ' ಅಂತ ಹೆಗಲ್ಮೇಲೆ ಕೈಹಾಕಿ ಮಾತಾಡಿಸ್ತಿದ್ರು. ಅದು ಭಾಳ ಹತ್ರಾಗಿಬಿಟ್ತು. ಈ ಸೋಶಿಯಲಿಸ್ಟ್ ಪಾರ್ಟಿಯಿಂದ ಅಥವಾ ಗೋಪಾಲ್ ಗೌಡ್ರಿಂದ ಅಂತ ಕಾಣಸ್ತದೆ, ಅಡಿಗರು ಮತ್ತು ಅನಂತಮೂರ್ತಿ ತುಂಬಾ ಆಮೇಲೆ ಹಿಡಿಸ್ಬಿಟ್ಟಿದ್ರು ನಮಗೆ. (ನಗುತ್ತಾ) ಅದರಲ್ಲೂ ಅನಂತಮೂರ್ತಿಯವರ ಗದ್ಯ ಇದೆಯಲ್ಲ, ಅದು ಭಾಳಾ ವಶಪಡಿಸಿ ಕೊಂಡಿತ್ತು ನಮ್ಮನ್ನ.

ಸಂ: ಮೈಸೂರಲ್ಲಿ ಹೋದಮೇಲೆ ನಿಮ್ಮ ಸಾಹಿತ್ಯದ ಅಭಿರುಚಿ ಬೆಳೆಸಿದವರು ಯಾರು?

ಶಾ: ನಮ್ಮ ಗುರುಗಳು ಮೈಸೂರಲ್ಲಿದ್ದಾಗ ಯಾರ್‍ಯಾರು? (ಅಭಿಮಾನದಿಂದ) ಶಿವರುದ್ರಪ್ಪ ನೋರು, ಪ್ರಭುಶಂಕರ್ರು, ಚಿದಾನಂದ್ ಮೂರ್ತಿ, ಸುಜನಾ, ತೀನಂಶ್ರೀ ಡಿ ಎಲ್ ನರಸಿಂಹಾಚಾರ್, ಎಸ್ ವಿ ಪರಮೇಶ್ವರಭಟ್ಟರು ಅದ್ಯಾಕ್ ಹೇಳ್ತೀರಿ.. (ನಗು)

ಸಂ: ಕುವೆಂಪು?

ಶಾ: ನಾವ್ ಹೋಗೋ ಹೊತ್ತಿಗೆ ಅವರು ಪ್ರೊಫೆಸರಾಗಿ ವೈಸ್ ಛಾನ್ಸಲರ್ ಆಗಿಬಿಟ್ಟಿದ್ರು. ಹಂಗಾಗಿ ನಮಿಗೆ ಕ್ಲಾಸ್ ತಗಾತಿರ್ಲಿಲ್ಲ. ಇನ್ನೊಂದ್ ವಿಷಯ ಕೇಳ್ರಿ. ಕನ್ನಡ ಓದಬೇಕೂ ಅಂತ ನನಿಗೆ. ಇಂಟರ್ ಮಿಡಿಯಟ್ಟಿನವರ್ಗೆ ನಾನೋದಿದ್ದು ಹಿಂದಿ. ಪರಮೇಶ್ವರ್ ಭಟ್ ಹತ್ರ ಹೋಗಿ 'ಸಾರ್ ನನಿಗೆ ಬಿಎ ನಲ್ಲಿ ಕನ್ನಡ ಓದ್ಬೇಕು ಅಂತ ಇದೀನಿ' ಅಂತ ಕೇಳ್ದೆ. 'ನೀನಲ್ಲಿ ಕನ್ನಡ ಓದ್ದೇ ಇರೋದ್ರಿಂದ ನಿನಿಗಿಲ್ಲಿ ಕೊಡಕಾಗಲ್ಲಾ' ಅಂದ್ರು. 'ಇಲ್ಲಾ ಸಾರ್, ನೀವು ನನಿಗೆ ಏನಾರೂ ಸಹಾಯ ಮಾಡ್ಬೇಕು' ಅಂದೆ. ಅವರು ತೀನಂಶ್ರೀ ಹತ್ರ ಕರ್ಕೊಂಡೋದ್ರು. ತೀನಂಶ್ರೀ ಹತ್ರ ಅವರು ಇಟ್ಟ ವಾದವೇನಪ್ಪ ಅಂತ್ಹೇಳಿದ್ರೆ: 'ನೋಡಿಸಾರ್, ಆನರ್ಸ್ ಓದ್ದೋ ಹುಡುಗ್ರು, ಆನರ್ಸ್ ಮುಗಿಸಿ ಎಂಎ

ಮಗಳು ಅನ್ ಪೂರ್ಣಾದೇವಿಯವರನ್ನೇ ರವಿಶಂಕರ್ ಮದುವೆಯಾಗಿದ್ದು. ಅಲೀ ಅಕಬರ್‌ಖಾನ್ ಅಂತ್ಹೇಳಿದ್ರೆ ಇವತ್ತು ಜಗತ್ನಲ್ಲಿ ನೇರಮಟ್ಟದಲ್ಲಿರುವ ಒಬ್ಬ ಸರೋದ್ ವಾದಕ. ಅವರು ಗುರುಗಳಾಗಿ ಸಿಕ್ಕಿದ್ದು ನನ್ ಅದೃಷ್ಟ ನೋಡ್ರಿ. ಬೊಂಬಾಯಿಯಲ್ಲಿ ತಮ್ಮ ಮನೇಲೇ ಇಟ್ಕೊಂಡು ನನಗೆ ಪಾಠ ಹೇಳಿಕೊಟ್ರು ಅವರು. ಅಲ್ಲಿಗೆ ರಾಜೀವ್ ತಾರಾನಾಥ್ ನನಗಿಂತ ಮೊದ್ಲು ಹೋಗಿ ವಾಪಸ್ ಬಂದಿದ್ರು ಮೈಸೂರಿಗೆ. ನಾನು ಒಂದು ವರ್ಷ ಅಭ್ಯಾಸ ಮಾಡ್ದೆ.

ಸಂ: ಮುಂದೆ?

ಶಾ: ನನ್ ಗ್ರಹಚಾರಕ್ಕೆ ಏನಾಗಿಬುಡ್ತು ಅಂದ್ರೆ, ಅಲೀ ಅಕಬರ್ ಮತ್ತು ರವಿಶಂಕರ್ ಇಬ್ಬರೂ ಅಮೇರಿಕಕ್ಕೆ ಹೋಗ್ತಾ ಇದ್ರು, ಇಂಡಿಯನ್ ಮ್ಯೂಸಿಕ್ ಪಾಠ ಹೇಳೋದಿಕ್ಕೆ. ಹೋದವರು ಬರಲೇ ಇಲ್ಲ ವಾಪಸ್. ಅಲೀ ಅಕಬರ್ ಹೆಂಡ್ತಿನೂ ಸಂಗೀತ್‌ಗಾರ್ತಿ. ಅವ್ರು ನನಗೆ ಪಾಠ ಹೇಳಿಕೊಡ್ತಿದ್ದವರು ಒಂದಿನ 'ನೀನ್ ಮೈಸೂರಿಗೆ ಹೋಗಿ ಓದು. ನೀ ಓದ್ಕೊಂಡ್ ಆಮೇಲ್ ಬಂದ್ರೆ ಕಲ್ಕತ್ತಾಕ್ಕೆ ಹೋಗಿ, ಅಲ್ಲಿ ಕಾಲೇಜೆಲ್ಲಾ ಇದೆ, ಚೆನ್ನಾಗಿ ಕಲೀಬೋದು' ಅಂತ ಹೇಳಿದರು. ಮೈಸೂರಿಗ್ ಬಂದು ನಾನು ಸೋಶಿಯಾಲಜಿ ಎಂಎಗೆ ಸೇರ್ಕೊಂಡೆ.

ಸಂ: ಮೈಸೂರಿಗೆ ಬಂದ್ಮೇಲೆ ಸಂಗೀತ ಮುಂದುವರೆಸಲಿಲ್ಲವಾ?

ಶಾ: ಒಂದ್ ಪ್ರೆಸ್ಸಿಟ್ಟಿದ್ವಲ್ಲಾ, ಅದರ ಗಲಾಟೇಲಿ ಸಂಗೀತ ನಿಂತೇ ಹೋಬಿಡ್ತು. ಆಮೇಲೆ 'ರಾಜೀವ್ ತಾರಾನಾಥ್ ಅಲ್ಲೇ ಮೈಸೂರಲ್ಲಿ ಇದಾನೆ. ಅವನತ್ರ ಕಲೀ ನೀನು' ಅಂತ ಅಲೀ ಅಕಬರಖಾನ್ ಹೇಳಿಕಳಿಸಿದ್ರು. ರಾಜೀವ್ ಚೆನ್ನಾಗಿ ಸರೋದ್ ಬಾರಿಸ್ತಾರೆ. ಆದ್ರೆ ಒಳ್ಳೇ ಮೇಷ್ಟ್ರಲ್ಲ. ನಮ್ ಗುರುಗಳು ಅಮೇರಿಕಾದಲ್ಲೇ ಸೆಟಲ್ ಆಗಿಬಿಟ್ಟರು. ಈಗ ಇಂಡಿಯಾದಲ್ಲೇ ಅಮ್ಜದ್ ಅಲಿಖಾನ್ ದೊಡ್ಡ ಕಲಾವಿದರು.

ಸಂ: ನೀವು ಪ್ರೆಸ್ ಇಟ್ಟಿದನ್ನು ಹೇಳಿದ್ರಿ. ಏನೇನು ಪ್ರಕಟಿಸಿದಿರಿ?

ಶಾ: ನನಗೂ ತೇಜಸ್ವೀಗೂ 'ಒಂದು ದೊಡ್ಡಪ್ರೆಸ್ ಇಡಬೇಕು ಮ್ಯಾಗಜೈನ್ ತರಬೇಕು' ಅಂತ ಯೋಚನೆ ಬಂತು. ಪ್ರೆಸ್ಸಿಡೋ ಸಲಹೆ ಕೊಟ್ಟೋರು ಗೋಪಾಲಕೃಷ್ಣ ಅಡಿಗರು. ನೃಪತುಂಗ ಮುದ್ರಣಾಲಯ ಅಂತ ಪ್ರೆಸ್ ಹೆಸರು. ಎರಡು ವರ್ಷಾ ಹೆಂಗೋ ನಡಿಸಿದಿವಿ. 'ಲಹರಿ' ಪತ್ರಿಕೆ ತಂದಿದ್ದು ಅವಾಗ್ಲೆ. ಕಂಬಾರರ 'ಹೇಳತೇನ ಕೇಳಾ' ಮೊದಲು ನಾವೇ ಪಬ್ಲಿಶ್ ಮಾಡಿದ್ದು. ಕಡೆಗೂ ನಮಗೆ ಅದಾಗ್ಲೇ ಇಲ್ಲ. ಯಾಕಂದ್ರೆ ವ್ಯವಹಾರ ಮನೋಭಾವ ಇಬ್ರಿಗೂ ಇರಲಿಲ್ಲ. ಸಿಕ್ಕಾಪಟ್ಟೆ ಲುಕ್ಸಾನ್ ಮಾಡ್ಕೊಂಡು, ಪ್ರೆಸ್ಸ್‌ನೆಲ್ಲ ಮಾರಿ, ತೇಜಸ್ವಿ ತಂಪಾಲ್ ತಗೊಂಡು ಮೂಡಿಗೆರೇಲಿ ಒಂದು ಎಸ್ಟೇಟ್ ತಗೊಂಡು ಹೋಗ್ಬಿಟ್ರು.

ಸಂ: ಕುವೆಂಪು ಲೋಹಿಯಾ ಪ್ರಭಾವದಲ್ಲಿದ್ದ ನೀವು ಅಡಿಗರು ಜತೇಲೂ ಇರ್ತಿದ್ದಿರಿ. ಆಗ ತಾತ್ವಿಕ ಭಿನ್ನಾಭಿಪ್ರಾಯಗಳು ಬರತಾ ಇದ್ದವಾ?

ಒಬ್ರೂ ಕಾಣ್ಸಲ್ಲ. ತೇಜಸ್ವೀದು ನಂದು ಸರಳವಿವಾಹ ಮಂತ್ರಮಾಂಗಲ್ಯ ಆದವಲ್ಲ, ಆಗ ಪುಟ್ಟಪ್ಪನೋರೆ ಹೇಳಿದ್ದೇನು ಅಂದ್ರೆ, 'ನೋಡೀ..., ಇಷ್ಟು ವರ್ಷ ಬೇಕಾಯ್ತು. ನಾನು ವಿದ್ಯಾರ್ಥಿಯಾಗಿ ಇದ್ದಾಗ್ಲಿಂದಲೂ ನನ್ ಜೊತೆಗಿದ್ದೋರಿಗೆಲ್ಲ ಹೇಳಿದ್ರೂ, ಒಬ್ನೇಒಬ್ಬ ಇದುನ್ ತಲೆಗೆ ಹಾಕ್ಕೊಳ್ಳಿಲ್ಲ. ಈ ಸುಧಾರಣೆ ಎಷ್ಟು ನಿಧಾನ ಅನ್ನೋದಿಕ್ಕೆ ಈಗ ನೀವು ಒಂದು ಗುಂಪು ತಯಾರಾಗಿದ್ದೀರಿ. ಇಷ್ಟು ಸಹನೆ ಇರ್ಬೇಕು. ಈಗಾದ್ರೂ ನೀವಾಗಿದೀರಲ್ಲ ನನಗೆ ಬಹಳ ಸಂತೋಷ' ಅಂತ ಕುತ್ಕೊಂಡು ಬರದು ಎಲ್ಲಾ ರೆಡಿ ಮಾಡಿಕೊಟ್ರು.

ಸಂ: ಮಂಡ್ಯದಲ್ಲಿ ಶಂಕರೇಗೌಡರು ಮುಂತಾದವರೆಲ್ಲ ಕುವೆಂಪು ವಿಚಾರಗಳಿಂದ ಪ್ರಭಾವಿತರಾಗಿದ್ದೋರು..

ಶಾ: ರೈತಸಂಘ ಸರಳ ವಿವಾಹಗಳನ್ನು ಶುರುಮಾಡಿದ್ಮೇಲೆ, ಶಂಕರೇಗೌಡ್ರು ಅವ್ರೆಲ್ಲ ಭಾಷಣದಲ್ಲಿ ಹೇಳಿದ್ ಕೇಳಿದೀನಿ ನಾನು. ಒಂದ್ ನಾಕಾರ್ ಜನ ಇರಬಹುದ್ ಅಷ್ಟೇನೆ. ಇನ್ ಉಳ್ಕೋರಿಗೆ ಪರಿಣಾಮ ಆಗ್ಲೇ ಇಲ್ಲ.

ಸಂ: ಶಾಮಣ್ಣಾ, ಕುವೆಂಪು ಬಿಟ್ರೆ ನಿಮ್ಮ ಆವರಿಸಿಕೊಂಡ ಇತರ ಕನ್ನಡದ ಲೇಖಕರು ಯಾರು?

ಶಾ: ನನಿಗೆ, ನಂಗೆ ತೇಜಸ್ವಿದ್ ಇಷ್ಟಾ ಆಗ್ತದೆ. ಬೇಂದ್ರೆ ಪದ್ಯಾ ಬಹಳ ಖುಶಿ ಕೊಡ್ತದೆ. ಕುವೆಂಪು ಗದ್ಯ ತುಂಬಾ ಖುಷಿ ಕೊಡುತ್ತೆ. ಆದರೆ ಪದ್ಯಗಳಲ್ಲಿ ಪುತಿ ನರಸಿಂಹಾಚಾರ್ಯ ರದ್ದು, ಮುಗಿಲುಗಳ ಮೇಲೆ ಒಂದು ಹಾಡಿದೆಯಲ್ಲ... ಭಾಳ ಹಿಂದೇನೂ ನಾವು ಅದುನ್ನ ಹಾಡ್ತಿದ್ವೊ. ಎಷ್ಟ್ ಚೆನ್ನಾಗಿದೆ ಅದು ಅಂತೀರಾ? (ರಾಗವಾಗಿ ಇಡೀ ಪದ್ಯವನ್ನು ಹಾಡುತ್ತಾ) 'ಕೃಷ್ಣನೆಂತೊಂದು ಮುಗಿಲೂ, ರಾಧೇಯಾದಿನ್ನೊಂದು ಮುಗಿಲೂ..'

ಸಂ: ನೀವೊಬ್ಬ ಒಳ್ಳೇ ಫೋಟೋಗ್ರಾಫರ್ ಕೂಡ ಆಗೀದೀರಿ. ಇದು ಹೆಂಗೆ ಸಾಧ್ಯ ಆಯಿತು?

ಶಾ: ನನಗೆ ಇವತ್ತು ಫೋಟೋಗ್ರಫಿಯಲ್ಲಿ ಆಸಕ್ತಿ ಹುಟ್ಟಿದ್ದು, ಒಬ್ರು ಫಿಜಿಕ್ಸ್ ಮೇಷ್ಟ್ರಿಂದ ಕಂಡ್ರಿ. ಭಗವಾನ್ ಅಂತ, ಅವರು ಕ್ಯಾಮರಾನ ಎಷ್ಟು ಚೆನ್ನಾಗಿ ಪಾಠ ಮಾಡಿದ್ರು ಅಂದ್ರೆ, ನನಿಗೆ ಅವತ್ತೇ ಆ ಕ್ಯಾಮರಾದ ಹುಚ್ಚುತ್ತಿ ಬಿಡ್ತು. ಸಿಗರೇಟ್ ಟಿನ್ ಬರ್ತಿತ್ತು ಆವಾಗ, ಅದರಲ್ಲೊಂದ್ ಕ್ಯಾಮರಾ ತಯಾರ್ ಮಾಡಿ ಎಕ್ಸಿಬಿಶನ್ನಿಗೆ ಇಟ್ಟಿದ್ದೆ ನಾನು. ಅವರು ಅವತ್ತು ಮಾಡಿದ ಪಾಠ, ಇವತ್ತು ನಾನು ಫೋಟೋಗ್ರಾಫರ್ ಆಗಾಕೆ ಕಾರಣಾ ನೋಡ್ರಿ.

ಸಂ: ಫೋಟೋಗ್ರಫಿ ನಿಮ್ಮ ದೃಷ್ಟಿಕೋನದಲ್ಲಿ ಏನಾದರೂ ಬದಲಾವಣೆ ತಂತಾ?

ಶಾ: ಮುಖ್ಯವಾಗಿ, ನಾನು ಕ್ಯಾಮರಾ ಹಿಡಿದು ಫೋಟೋ ತೆಗೆಯೋದು ಶುರು ಆದ್ಮೇಲೆ ಕೋವೀಲಿ ಪ್ರಾಣಿ ಹೊಡೆಯೋದ್ ಬಿಟ್ಟೆ. ತೇಜಸ್ವೀನೂ ಮೊದಲು ಬಾಳ ಶಿಕಾರಿ ಮಾಡೋರು. ಯಾವಾಗ ಕ್ಯಾಮರಾ ಹಿಡಿದು ಒಳ್ಳೆ ಫೋಟೋಗ್ರಾಫರ್ ಆದ್ರೋ, ಕಂಡಿದ್ನೆಲ್ಲ ಸೆರೆ ಹಿಡಿಬೇಕು. ಹೊಡೀಬಾರ್ದು ಅನ್ನುವ ಪ್ರಜ್ಞೆ ಬಂತು ನೋಡ್ರಿ.

ಸಂ: ಸೆರೆಹಿಡಿಯೋ ವಸ್ತು ಜತೆಗೆ ಹೊಸ ಸಂಬಂಧಗಳು ಶುರುವಾಗ್ತವೆ?

ರಾ: ಹೌದು... ಚೆಂತ್ರೇಗೆ ಕ್ಯಾಮರಾ ಹಿಡಿದ್ ತಕ್ಷಣ ಒಂದ್ ಚೌಕಟ್ ನಲ್ಲಿ ನೋಡ್ತೀವಿ ಜಗತ್ತನ್ನ. ನಾವು ತೆಗೆಯುವ ಸಬ್ಜೆಕ್ಟು. ಅದು ವಿಧಾನಕ್ ನಮ್ಮ ಜೀವನಕ್ಕೆ ಒಂದ್ ಚೌಕಟ್ ಹಾಕಿಕೊಡುತ್ತೆ. ನಮಗೆ ಗೊತ್ತೇ ಆಗಲ್ಲ ಅದು. ಹಾಗಾಗಿ ಕ್ಯಾಮರಾ ಬರೇ ಕ್ಯಾಮರಾ ಅಲ್ಲ ಅದು.

ಸಂ: ಫೋಟೋಗ್ರಾಫರ್ ಆಗಿ ಯಾವ ಸಂಗತಿ ನಿಮ್ಮನ್ನು ಈಗಲೂ ಹಾಂಟಿಂಗ್ ಮಾಡ್ತಿದೆ?

ರಾ: ಫೋಟೋಗ್ರಫಿ ನಾನು ಯಾವಾಗ್ಲು, ಈ ಟೆಲಿ ಫೋಟೋಲೆನ್ಸ್ ಹೆಚ್ಚು ಬಳಸಲ್ಲ. ಟೆಲಿ ಫೋಟೋಲೆನ್ಸ್ ಯೂಸ್ ಮಾಡಿದಷ್ಟೂ ದೂರದಲ್ಲಿರೋ ಸಬ್ ಜೆಕ್ಟ್ ಹತ್ತಿರಕ್ಕೆ ತಗೊಂಡ್ಬಿಟ್ ಫೋಟೋ ತಗೀತೀವಿ. ಮನುಷ್ಯರಾಗಿ ಅಬ್ಸರ್ ವೇಶನ್ ಕಡಿಮೆ ಆಯಿತ್ತೆ. ಅದಕ್ಕೇ ಫೀಲ್ಡ್ ಮಾಡ್ಕೊಂಡು ಅದಷ್ಟು ಹತ್ರಕ್ಕ್ಹೋಗಿ, ಅದರ ಗುರ್ತಾ ಪರಿಚಯ ಮಾಡಕೊಂಡು ಫೋಟೋ ತಗುದ್ರೆ, ಅದರ ಹ್ಯಾಬಿಟ್ಸ್ ಇತ್ಯಾದಿಗಳೆಲ್ಲ ಪರಿಚಯ ಆಗ್ತದೆ. ಒಂದ್ ಘಟನೆ ಹೇಳ್ತೀನಿ. ನಮ್ ಗದ್ದೆಮನೆ ಎದ್ರುಗಡೇನೇ ನಡೆದಿದ್ದು. ಒಂದ್ ಸೂರಕ್ಕಿ ಸನ್ ಬರ್ಡ್ ಅಂತೀವಲ್ಲ ಅದು, ತನ್ನ ಮರೀನ ಗೂಡ್ ಕಟ್ಟಿ ಇನ್ನೇನ್ ಹಾರಿಸ್ಬೇಕು. ಇನ್ನೆರಡ್ಮೂರು ದಿನದಲ್ಲಿ ಹಾರ್ಸಿಬಿಡುತ್ತೆ ತಾಯಿ. ನಾನು ಅದರ ಫೋಟೋ ತಗೀಬೇಕಂತ ಹೇಳಿಕೊಂಡ್ ದಿನಾ ಕಾಯ್ತಿದ್ದೆ. ಒಂದಿನ ನೋಡ್ತೀನಿ, ಆ ಮರಿ ಒದ್ದಾಡ್ತಾ ಇದೆ! ಇದು ಏನಂತದ್ದೋ ಹಿಡ್ಕೊಂಡು ಗುಟುಕು ಕೊಟ್ಟಂಗೆ ಮಾಡ್ತಾ ಇದೆ. ಅದರ ಮರಿ ಒದ್ದಾಡ್ತಾ ಇದೆ. ಏನಕ್ಕೆ ಹಿಂಗಾಗಿದೆ ಅಂತ ಹೇಳ್ಬಿಟ್ಟು ನೋಡಿದ್ರೆ ಮರಿಗಳಿಗೆ ಇರುವೆಗಳು ಹತ್ತಿಬಿಟ್ಟಿವೆ. ತಂದೆ ತಾಯಿ ಎರಡೂನು, ಒಂದೈದು ನಿಮಿಷದೊಳಗೆ ಎಂಥದೋ ಈ ಹಾವಿನ್ ಪೊರೆತರಹ ಬಿಳೀಪುಡಿ ಅದೆಂತದೋ ತೊಗೊಂಬಂದು ಗೂಡುತುಂಬ ಹಚ್ಚಿಬಿಟ್ವು ಕಂಡ್ರಿ. ಇರುವೆಗಳು ಬರೋವ್ರು ಟೋಟಲ್ ಅಂತ ವಾಪಸ್ ಹೋಗೋವು! ಅದು ಯಾವ ಸಂಜೀವಿನಿನೋ ಯಾವ್ ಗಿಡಮೂಲಿಕೆನೋ ನಮ್ಗೇನ್ ಗೊತ್ತು? ಇರುವೆಗಳಿಗೆ ಗೂಡತ್ರ ಹೋಗಾಕ್ಕಾಗ್ಲೇ ಇಲ್ಲ ನೋಡ್ರಿ. ಮರಿ ಉಳ್ಕೊಳ್ಳಯ್ತು. ಇದು ನಾನು ಹತ್ರದಿಂದ ಫೋಟೋ ತೆಗೀತಾ ಕಂಡಂತಹ ಒಂದು ವಿಚಿತ್ರ. ಎಷ್ಟೋ ಸಾರಿ ನಮಗೆ ಈ ಫೋಟೋಗಿಂತ ಇವನ್ನ ಅಬ್ಸರ್ವ್ ಮಾಡಕ್ ಸಿಗುತ್ತಲ್ಲ ಅದು ಖುಷಿ ಕೊಡುತ್ತೆ.

ಸಂ: ಸಾಹಿತ್ಯ ಮತ್ತು ಫೋಟೋಗ್ರಫಿ ಇವೆರಡರಲ್ಲಿ ಜೀವನ ನೋಡೋ ವಿಧಾನದಲ್ಲಿ ಏನು ವ್ಯತ್ಯಾಸ?

ರಾ: ಇಲ್ಲಿ ಭಾಷೆಯ ಮುಖಾಂತರ ಒಂದು ಅನುಭವವನ್ನ ಹೇಳ್ಕೊಂಡ್ ಹೋಗ್ತಾರೆ. ಅದೇ ಅನುಭವವನ್ನ ಒಂದು ಚಿತ್ರ ನೋಡಿ ಹಂಗೇ ಎಂಜಾಯ್ ಮಾಡ್ಬೇಕು. ಅದು ಬೇರೆ ಇದು ಬೇರೆ ಅಂತ ಅನಿಸ್ತದೆ. ಎಲ್ಲದನ್ನ ಸುಮ್ನೆ ಓದ್ಕೊಂಡ್ ಖುಷಿ ಪಟ್ಕೊಂಡ್ ಹೋಗಿಬಿಡಬೇಕು. ವಿಮರ್ಶಾತ್ಮಕವಾಗಿ ಪ ಂಗೋಳಲಿ ನಾನು?

ಸಂ: ಈಗ ನಿಮ್ಮ [illegible] ಅನೇಕ ಪ್ರಯೋಗಗಳನ್ನ ಮಾಡ್ತಾ ಇದ್ದೀರಿ ಅವುಗಳ ಬಗ್ಗೆ ವಿವರಿಸಿ.

ಶಾ: ಮೊದಲ್ನೇದು ನಮ್ಮ ಊರನ್ನ ಕ್ಲೀನ್ ಮಾಡ್ಬೇಕು ಅಂತ. ಗ್ರಾಮನೈರ್ಮಲ್ಯ ಚಳುವಳಿ ಪ್ರಾರಂಭಮಾಡಿದ್ವು. ಗ್ರಾಮನೈರ್ಮಲ್ಯ ಅಂತಕ್ಷಣ. ಮೊದಲು ನಮ್ಮ ಮಲಮೂತ್ರಗಳಪ್ಪು ಬರ್ತದೆ. ಪ್ರತಿಯೊಂದು ಮನೆಗೂ ಶೌಚಾಲಯ ಇರ್ಬೇಕು. ಕಕ್ಕಸ್ ಬರೋರಿಗೆಲ್ಲ ಶೌಚಾಲಯ ಇರ್ಬೇಕು ತಾನೆ? ಹಂಗೆ ನಮ್ಮೂರಲ್ಲಿ ಎಲ್ಲ ಮನೆಗಳಲ್ಲೂ ಶೌಚಾಲಯ ಸಾಲಾಗೀಲಾ ಮಾಡಿ ಕಟ್ಸಿದಿವಿ. ಕಡೀಗೆ 'ಅಲ್ ಕೂತ್ರೆ ನಮಗ್ ಬರೋದೇ ಇಲ್ಲ' ಅಂತ್ಹೇಳಿ ಕೆಲವರು, 'ಇನ್ ಕೂರೋದೆ ಇಲ್ಲ' ಅಂತ ಕೆಲವರು, ಹಿಂಗೆಲ್ಲ ಏನೇನೋ ಆಗಿದಾವೆ. (ನಗು) ನಮ್ಮ ಈ ರೀತಿಯಾದಂಥಾ ಪ್ರಯೋಗಗಳನ್ನ ಸರ್ಕಾರ ಗಮನಿಸಿ, ಎಂ.ಪಿ. ಪ್ರಕಾಶ್ ಅವರೂ ನಾವೂ ಕೂತು ಆಲೋಚನೆ ಮಾಡಿ, 'ನಿರ್ಮಲ ಕರ್ನಾಟಕ' ಅಂತ ಯೋಜನೆ ತಯಾರಿಸಿದಿವಿ.

ಸಂ: ರೈತರಿಗೆ ಇದರ ಪ್ರಯೋಜನ ಏನು?

ಶಾ: ನಾಕೈದು ಜನರ ಕುಟುಂಬದ್ ಒಂದ್ ಕಕ್ಕಸ್ಸುಗುಂಡಿ ೧೦-೧೨ ವರ್ಷಕ್ಕೆ ತುಂಬುತ್ತಾ? ತುಂಬಿದ ಮೇಲೆ ಕರೆಕ್ಟಾಗಿ ನಾಕು ಕ್ವಿಂಟಾಲ್ ಸುಫಲಾದಷ್ಟು ಗೊಬ್ಬರಾ ಆಗ್ತದೆ. ನಾಕು ಕ್ವಿಂಟಾಲ್ ಸುಫಲಾ ಬೆಲೆಯೆಷ್ಟು? ಅಷ್ಟ್ ದುಡ್ಡನ್ನ ಸರಕಾರದೋರು ಯಾಕ್ ಕೊಡಬಾರ್ದು ಅಡ್ವಾನ್ಸಾಗಿ? ನೀವು ಅದುನ್ನ ಸುಫಲಾ ಕಂಪನಿಗೆ ಹರಾಜಿಗೆ ಹಾಕಿ. ಅವ್ರು ಹರಾಜಿಗೆ ತೊಗೊಂಡೋಗಿ ಗುಳಿಗೆ ಮಾಡಿ ನಮಿಗೇ ಮಾರ್ಲಿ. ನಮ್ಮ ಪ್ರಗತಿಪರ ರೈತರಾದ ದೇವಂಗಿ ಪ್ರಫುಲ್ಲಚಂದ್ರ ಅವರು 'ಶಿವಮೊಗ್ಗಾ ಜಿಲ್ಲೆ ಪೂರ್ತಿ ನಾ ಹರಾಜಿಗೆ ನಾಹಿಡಿತೀನಿ ಕಣಯ್ಯ. ನಂಗೊತ್ತು ಅದುನ್ ತಗೊಂಡೋಗಿ ಹ್ಯಂಗ್ ಗುಳಿಗಿ ಮಡ್ಬೇಕಂತೇಳಿ' ಅಂದ್ರು. ಹೌದೋ ಅಲ್ವೋ ಕೇಳಿನೋಡ್ರಿ.

ಸಂ: ಈಗ ಗ್ರಂಥಾಲಯ ಚಳುವಳಿ ಮಾಡ್ತಾ ಇದೀರಿ ಅಂತ ಕೇಳಿದೀವಿ. ಅದರ ಸ್ವರೂಪ ಏನು?

ಶಾ: ಪ್ರತೀ ಗ್ರಾಮಕ್ಕೆ ಅಥವಾ ಗ್ರಾಮಪಂಚಾಯ್ತಿ ಒಳಗೆ ಒಂದು ಲೈಬ್ರರಿ ಇರಬೇಕು ಅಂಬೋದು ಈ ಚಳುವಳಿಯ ತತ್ವ. ನಮ್ಮ ರಾಜ್ಯದಲ್ಲಿ ಒಟ್ಟು ೫೦೦೦ ಗ್ರಾಮ ಪಂಚಾಯ್ತಿ ಇದಾವೆ. ಒಂದೊಂದ್ ಗ್ರಾಮಪಂಚಾಯ್ತಿಗೆ ಒಂದೊಂದ್ ಲೈಬ್ರರಿ ಕೊಟ್ರೆ, ೫೦೦೦ ಲೈಬ್ರರಿಗಳಾದ್ವು. ೫೦೦೦ ಪುಸ್ತಕ ಖರ್ಚಾಗ್ತವೆ. ನಿಮ್ಮ ಭಾಷೆ ಬೆಳೀತದೆ. ಓದೋರ್ ಸಂಖ್ಯೆ ಜಾಸ್ತಿಯಾಗ್ತದೆ. ಇವತ್ತು ಹಳ್ಳಿಗಳಲ್ಲಿ ಹೋಗಿ ನೋಡಿ, ಸುಮ್ನೆ ಕೂತಿರ್ತಾರೆ ಕೆಲ್ಸಿಲ್ದೆ. ಅವ್ರು ಪೇಪರ್ ಗೀಪರ್ ಬಂದ್ರೆ ಓದ್ಕೊಂಡ್ ಮಾಡ್ಕೊಂಡು ಒಂಚೂರ್ ಜೀವಂತವಾಗಿ ಇರ್ತಾರೆ.

ಸಂ: ಕಾಲೇಜು ಓದಿ ಹೊರಗಡೆ ಕೆಲಸಾನೂ ಸಿಗದೆ, ಇತ್ತ ಮನೇಲಿ ಬೇಸಾಯದ ಕೆಲಸ ಮಾಡೋಕಾಗದೆ ಇರೋ ಒಂದು ತಲೆಮಾರೇ ಹಳ್ಳಿಗಳಲ್ಲಿ ಸೃಷ್ಟಿಯಾಗಿರಬೇಕು...

ಶಾ: ನಿಜ, ಜಮೀನು ಸಾಕಷ್ಟಿಲ್ದೇನೆ ಒಂದು ಅದೊಂದು ವರ್ಗ ಸೃಷ್ಟಿಯಾಗಿಬಿಟ್ಟಿದೆ ಹಳ್ಳಿಗಳಲ್ಲಿ. ಅವಕ್ಕೆ ಈ ಕೈಗಾರಿಕೆ ವ್ಯಾಪಾರ ಈ ತರದವ್ ಏನಾರುನೂ ಹಚ್ಕೊಡಬೇಕು

ಕಂಡ್ರಿ. ಏನ್, ಜನಕ್ಕೆ ಅಂತ್ರೇಳಿ ಮಾಡ್ತೀರಿ? ಆದರೆ ನಾನು ನೋಡಿದಂಗೆ ಹಂಗ್ ಬಿಡ್ಕೊಂಡ್ ಬಂದವರೆಲ್ಲಾನೂ ತಮಗಿರಾ ಭೂಮೀಲಿ ತೃಪ್ತಿಯಿಂದ ಕೆಲ್ಸ ಮಾಡ್ಕೊಂಡಿರೋ ಹಂಗೆ ಕಾಣಸ್ತದಪ್ಪಾ.

ಸಂ: ಶಾಮಣ್ಣಾ, ನೀವು ' 'ಮನೆಮದ್ಯದ ಸಿದ್ಧಾಂತ' ' ಅಂತ ಒಂದು ವಾದ ಮಂಡಿಸಿದ್ರಿ. ಏನದು?

ಶಾ: ಹಿಂದೆ ದೇಸಾಯಿ ಕಮಿಶನ್ ಅಂತ ಕಳ್ ಬಟ್ಟಿ ಕುಡದು ಜನ ಸತ್ರು ಅಂತ ವಿಚಾರಣೆ ಮಾಡೋಕೆ ನೇಮ್ಸಿದ್ರಲ್ಲ, ಅದು ಬಂದಾಗ, ರೈತ್ ಸಂಘದ ಪರವಾಗಿ ಇಟ್ಟ ವಾದಾ ಅದು. ಎಲ್ಲಾ ತರದ ನಿಶೆ ಪದಾರ್ಥಗಳನ್ನ ಮೋಸಂಬಿ ಹಣ್ ಹಾಕಿ, ಕಿತ್ತಳೆಹಣ್ ಹಾಕಿ, ಗೇರ್ ಹಣ್ ಹಾಕಿ, ಬತ್ತದ ಮೊಳಕೆ ಹಾಕಿ ತಯಾರ್ ಮಾಡಿದ್ವಿ ಮನೇಲೇ. ಅಕ್ಕೀಬೋಜಾ ಅಂತ ಮಾಡಿದ್ವಿ. ಬತ್ತಾನ ಮೊಳಕೆ ಬರ್ಸಿ ಕುಟ್ಟಿ, ಮಾಡ್ತಾರೆ, ಗಂಜಿ ಥರಾ. ಇದನ್ನು ಎರಡು ಲೋಟ ಕುಡುದ್ರೆ ಊಟಾನೆ ಬ್ಯಾಡ. ಆಹಾರವೂ ಆಗ್ತದೆ, ಸ್ವಲ್ಪ ತಲೆಗೂ ಹತ್ತದೆ. ಇವೆಲ್ಲಾ ತಯಾರ್ ಮಾಡಿ 'ಸರ್ಕಾರದ್ದೇನು ನಮ್ದೇನು? ಅವ್ರಿಗೆ ಖರ್ಚ್ ಬರೋದೆಷ್ಟು, ನಮಿಗ್ ಖರ್ಚ್ ಬರೋದೆಷ್ಟು' ಅಂತ ದೇಸಾಯಿ ಕಮಿಶನ್ ಮುಂದೆ ಇಟ್ವಿ ನಾವು. 'ಇದು ಒಂದ್ ಅಡಿಗೆ ಮನೆಯ ವ್ಯವಹಾರ. ಒಂದ್ ಪಾನೀಯ ಇದು. ಇದನ್ ನೀವು ಟೆಂಡರ್ ಸಿಸ್ಟಮ್ ಮಾಡಿ ಹರಾಜು ಕೂಗಿ ಯಾಕ್ ಇವೆಲ್ಲ ಮಾಡ್ತೀರಿ? ಇಂಡಸ್ಟ್ರಿ ಮಾಡ್ಬೇಡಿ ನೀವು. ಅದರ ಪಾಡಿಗ್ ಅದುನ್ ಬಿಟ್ಬಿಡಿ. ಬೇಕಾದಾಗ ಮಾಡ್ಕೋತಾರೆ ಕುಡೀತಾರೆ. ಮಾರಾಟ ಆಗದಂಗೆ ಮಾತ್ರ ನೋಡ್ಕೋಬೇಕು ನೀವು. ಇದು ಕಳ್ಳಭಟ್ಟಿ ಪ್ರಕರಣಕ್ಕೇ ಮದ್ದೇ ಹೊರ್ತು, ನೀವು ಈಗಿನ ಸಿಸ್ಟಮ್‌ನಲ್ಲಿ ನೋಡಿದ್ರೆ ಏನು ಮಾಡಿದ್ರೂ ರಿಪೇರಿ ಮಾಡಕ್ಕಾಗಲ್ಲ. ಇನ್ನೂ ವಿಕೋಪಕ್ಕೆ ಹೋಗುತ್ತೆ. ನೀವು ವರಮಾನ ಇಲ್ಲ ಸರ್ಕಾರಕ್ಕೆ ಅಂತ ಹೇಳೋದಿದೆಯಲ್ಲ ಅದು ತಪ್ಪು. ಅನೈತಿಕ ರೀತಿಯಿಂದ ಬರುವಂಥ ವರಮಾನವನ್ನ ಸರ್ಕಾರಿ ಖಜಾನೆ ವರಮಾನ ಅಂತ ಕರೀಬಾರ್ದು ಯಾವಾಗ್ಲೂ. ಇದೆಲ್ಲ ರಾಜಾದಾಯ ಅಗೋದಂದ್ರೆ, ನಾಳೆ ಸೂಳೆಗಾರಿಕೆ ಇಂದ ಬರ್ಲಿ ಅಂತ ಮಾಡ್ತೀರಿ ನೀವು. ಇದು ಸರಿ ಅಲ್ಲ. ಆದ್ದರಿಂದ ಮನೇಮದ್ಯ ಬೇಕಾದಾಗ ಮಾಡ್ಕೊಳೋದಕ್ಕೆ ಬಿಡೋದಿದೆಯಲ್ಲ ಅದೇ ಉತ್ತಮವಾದ ಮಾರ್ಗ' ಅಂತ ಹೇಳಿದಿವಿ.

ಸಂ: ವಾದ ಏನೋ ಚೆನ್ನಾಗಿದೆ. ಆದರೆ ಈ ಆಧುನಿಕ ಬದುಕಿನಲ್ಲಿ ಇದು ಪ್ರಾಕ್ಟಿಕಲ್ ಅಂತ ಅನಸುತ್ತಾ?

ಶಾ: ಯಾಕಲ್ಲ? ನಮ್ಮ ಹಿಂದಿನೋರ್ ಬದುಕಿರ್ಲಿಲ್ವಾ ಹಂಗಾರೆ? ಈ ವಿಕೋಪಕ್ಕೆ ಹೋಗಿತ್ತಾ ಅವಾಗ?

ಸಂ: ಮಲೆನಾಡಿನಲ್ಲಿ ಇದು ಸಾಧ್ಯ ಇರಬಹುದು. ಆದರೆ..

ಶಾ: ಎಲ್ಲ ಪರಿಯಾಗಳಲ್ಲೂ ಸಾಧ್ಯ. ಇದುನ್ನ ಸರಿಯಾಗಿ ಕುತ್ಕೊಂಡ್ ವಿಚಾರ ಮಾಡಿ

ಒಂದು ತೀರ್ಮಾನಕ್ ಬರ್ರಿ. ಪ್ರಗತಿ ಅನ್ನೋದನ್ನ ನಾವು ಈಗ ಅದಿರೋ ದಾರಿಯಲ್ಲೇ ತಿಳ್ಕೊಂಡಾಗ ಬೇರೆ ಅರ್ಥ. ನಮಗೆ ಬೇಕಾದಂತೆ ತಿಳ್ಕೊಂಡಾಗ ಬೇರೆ ಅರ್ಥ.

ಸಂ: ನೀವು ಮಲೆನಾಡಿನ ಅನೇಕ ಪರಿಸರ ಚಳುವಳಿಗಳಲ್ಲಿ ಇದೀರಿ. ನಿಜವಾಗಲೂ ಅಲ್ಲಿ ಏನಾಗ್ತಾ ಇದೆ?

ಶಾ: ಸರಳವಾಗಿ ಹೇಳ್ಬೇಕು ಅಂದ್ರೆ ಒಂದ್ ಗಿಡ ನೆಡ್ತೀವಿ. ಮೂರು ಮಾಯ ಆಗ್ತಾ ಇವೆ. ಮೂರು ಮಗು ಹುಟ್ಟವೆ, ಒಂದು ಮಗುವಿಗೆ ಮಾತ್ರ ಸಾಲ್ವೇಷನ್ ಅಂತ ನೀಡ್ತಾ ಇದೀರಿ ನೀವು. ಸರ್ಕಾರದಿಂದ ಕಾಡನ್ನ ನೀಲಗಿರಿ ಬೆಳೆಯೋಕೆ ಇಂಡಸ್ಟ್ರಿಗೆ ಕೊಡೋದು, ಟೂರಿಸಂಗೆ ಕೊಡೋದು, ಗಣಿಗಾರಿಕೆಗೆ ಕೊಡೋದು, ಇವೆಲ್ಲಾ ದೊಡ್ಡ ಹೊಡ್ತಾ ಕಂಡ್ರಿ.

ಸಂ: ಕಾಫಿ ಎಸ್ಟೇಟ್ ಗಳಿಗೆ ಕೊಡೋದು? .

ಶಾ: ಚಿಕ್ಕೋನಿದ್ದಾಗಿಂದ ನೋಡ್ದಂತೆ ಕಾಫಿ ಪ್ಲಾಂಟೇಶನ್ ಇದಾವಲ್ಲ, ಅಲ್ಲಿ ಪೂರ್ತಿ ಕಾಡು ನಾಶಾ ಆಗೋಲ್ಲ. ಕಾಫಿ ಬೆಳೀಬೇಕಾದ್ರೆ ಶೇಡ್ ಬೇಕೇಬೇಕು. ಅವರು ಅಷ್ಟೊಂದು ಹಾನಿ ಮಾಡಲ್ಲ...

ಸಂ: ಆದರೂ ಸಾರ್ವಜನಿಕವಾಗಿದ್ದ ಕಾಡು ಖಾಸಗೀ ಆಸ್ತಿಯಾಗಿ ಬಿಡುತ್ತಲ್ವಾ?

ಶಾ: ಹೌದು, ಪ್ರೈವೇಟ್ ಪ್ರಾಪರ್ಟಿಯಾಗಿ ಬಿಡುತ್ತೆ.

ಸಂ: ಶಾಮಣ್ಣಾ, ನೀವು ಹಳ್ಳೀಲಿ ಇರೋರಾದ್ದರಿಂದ ಈ ಪ್ರಶ್ನೆ ಕೇಳ್ತೀದೀನಿ. ಈ ತಾಲೂಕು ಪಂಚಾಯಿತಿ ಜಿಲ್ಲಾ ಪಂಚಾಯಿತಿ ವ್ಯವಸ್ಥೆ ಬಂದಮೇಲೆ ಹಳ್ಳಿಗಳಲ್ಲಿ ಉಂಟಾಗಿರೋ ಬದಲಾವಣೆಗಳು ಎಂಥವು?

ಶಾ: ಗೆದ್ದುಬಂದಂತಹ ಈ ಮಹಿಳೆಯರನ್ನ ಅಥವಾ ದಲಿತರನ್ನ ಕಂಡಾಗ, 'ಇವರು ಗೆದ್ದುಬಂದಿದ್ರಿಂದ ಹ್ಯಂಗ್ ಹೆದ್ರುತಾರೆ ನೋಡು' ಅಂತ ಖುಶೀನೆ ಆಗ್ತದೆ. ಈ ಗೆಲವು ಸಿಂಬಾಲಿಕ್ಕಾಗಿದೆ. 'ನೋಡಪ್ಪಾ ಅವ್ರೂ ಎಲೆಕ್ಷನ್‌ಗೆ ನಿಂತು ನಾಳೆ ಗೆದ್ದು ಬರ್ತಾರೆ. ಅವರೇ ನಮಿಗೆಲ್ಲ ಜಮೀನ್ ಸ್ಯಾಂಕ್ಷನ್ ಮಾಡೋರಾಗ್ತಾರೆ' ಅನ್ನೋ ಒಂದ್ ಭಯ, ಶೋಷಣೆ ಮಾಡಿದಂತಹ ಜನಕ್ಕೆ ಉಂಟಾಗಿದೆ. ಕೆಳವರ್ಗದವರಿಗೂ ಒಂದ್ ಆತ್ಮವಿಶ್ವಾಸ ಬಂದಿದೆ ಕೆಲವ್ ಕಡೆ. ಆದರೆ ಈ ಚುನಾವಣೆಯಲ್ಲಿ ವಂಚನೆ ಮಾಡಿ ಓಟು ತಗೋಳೋದಿದೆಯಲ್ಲ, ಸರಾಯಿ ಕುಡಿಸಿ ಇನ್ನೊಂದ್ ಮಾಡಿದ್ದಲ್ದೆ ನಾವು ಗೆಲ್ಲಕೇ ಆಗಲ್ಲ ಅನ್ನೋದಿದೆಯಲ್ಲಾ, ಅದನ್ನ ನೋಡ್ದಾಗ ದು: ಖ ಆಗುತ್ತೆ. ಕಡಿಗೂ ಇವರನ್ನ ಗೆಲ್ಸೋರು ಸೋಲಸೋರು ಬೇರೆಯವರೆ. ಇವರ್ತಾಗ್ ತಮ್ಮ ಕೆಲ್ಸಕಾರ್ಯ ಮಾಡ್ಸೋರು ಬೇರೆಯವರೆ. ಹಿಂಗಿದ್ದಾಗ ಹ್ಯಂಗ್ ಪರಿಪೂರ್ಣ ವ್ಯಕ್ತಿ ಆಗ್ತಾರೆ ಅವರು ಅನ್ನೋ ಗುಮಾನಿ ಇದೆ. ನನಗನಿಸುತ್ತೆ, ಇದರ ಜೊತ್ ಜೊತೆಗೇನೆ ಅವರಿಗೆ ಸಾಕಷ್ಟು ಲೀಡರ್‌ಶಿಪ್ ಟ್ರೈನಿಂಗ್ ಕೊಡಬೇಕು ಅಂತ.

ಸಂ: ನೀವು ಸಮಾಜವಾದಿಗಳ ಭೂಹೋರಾಟವನ್ನ ನೋಡಿದೀರಿ. ದಲಿತ ಸಂಘರ್ಷ ಸಮಿತಿ

ಹೋರಾಟ ಮಾಡಿದ್ವಿ. ಆಮೇಲೇನೇ ರೈತಸಂಘದ ಕಾರ್ಯಕ್ರಮಗಳು ಶುರುವಾಗಿದ್ದು.

ಸಂ: ಕಾಗೋಡು ಸತ್ಯಾಗ್ರಹದಲ್ಲಿ ಕಾಣಿಸಿಕೊಂಡಿದ್ದ ಸಮಾಜವಾದಿ ಕಿಡಿ ಮತ್ತೆ ಕಾಣಿಸಿಕೊಂಡಿದ್ದು ಈ ರೈತಚಳುವಳಿಯಲ್ಲಿ ಅನ್ಸುತ್ತಾ?

ಶಾ: ಖಂಡಿತಾ ಹೌದು. ಮತ್ತೆ ಸಮಾಜವಾದಿ ಚಳುವಳೀನ ಇನ್ನೂ ಶಕ್ತಿಯುತವಾಗಿ ನಡ್ಸಕೆ ಸಾಧ್ಯ ಆಗ್ತಾ ಇದೆ ಅಂತಾನೇ ಅನಿಸ್ತಿತ್ತು ನಮಿಗೆ.

ಸಂ: ಆದರೆ ಕೊನೇಪಕ್ಷ ಕಾಗೋಡು ಸತ್ಯಾಗ್ರಹ ಗೇಣೀರೈತರ ಕೇಂದ್ರದಲ್ಲಿದ್ದಂತೆ, ಈ ರೈತಚಳುವಳಿ ಆಗಲಿಲ್ಲ. ಇದು ದೊಡ್ಡ ರೈತರ ಚಳುವಳಿ..

ಶಾ: ಹ್ಞೂಂ. (ನಿಟ್ಟುಸಿರು ಬಿಡುತ್ತಾ) ಅದು ನಿಜ. ನಮ್ ಗ್ರಹಚಾರಕ್ಕೆ ಎಲ್ಲಾ ಅವರೇ ಸೇರ್ಕೊಂಡ್ರು. ಯಾಕಂದ್ರೆ ಲಾಭ ಮಾಡ್ಕೋಬೇಕಾಗಿತ್ತು. ಹೋರಾಟದಲ್ಲಿ ಇದೆಲ್ಲ ಇದ್ದದ್ದೇ. ಸಾಲಮನ್ನಾ, ವೈಜ್ಞಾನಿಕವಾದ ಬೆಲೆನೀತಿ ಇವೆಲ್ಲ ಹೌದು. ಜತೆಜತೆಗೆ ಕೃಷಿಕಾರ್ಮಿಕರಿಗೆ ನ್ಯಾಯವಾದ ವೇತನ, ಅವರಿಗೂ ಜಮೀನ್ ಕೊಡಬೇಕು ಅನ್ನೋ ಹೋರಾಟಾನ, ಸೋಶಿಯಲಿಸ್ಟ್ ಪಾರ್ಟಿ ಮಾಡಿದಷ್ಟು ಪ್ರಾಮಾಣಿಕವಾಗಿ ನಾವು ಮಾಡ್ಲಿಲ್ಲ. ಆದ್ದರಿಂದ ದೊಡ್ ಭೂಮಾಲಿಕರು ಇಲ್ಲಿ ಹೆಚ್ಚಿದ್ದಾರೆ ಅನ್ನೋ ಮಾತು ಇದೆಯಲ್ಲಾ, ಸತ್ಯ ಅದು. ನಮಗೆ ಇದು ಅನಿಸ್ತಾನೇ ಇತ್ತು. ಏನಾಯ್ತು ಅಂತ್ಹೇಳಿದ್ರೆ, ಜನಾನ್ ತಗೊಂಡು ಹೋಗೋಕೆ ಒಂದೋ ಒಕ್ಕಲಿಗರು ಇಲ್ಲಾ ಲಿಂಗಾಯತರು ಬಿಟ್ರೆ ಬೇರೆ ಯಾರೂ ಇಲ್ಲ. ಬೇರೆಯವರು ನಮ್ಮ ಜತೆ ಬರಲೇ ಇಲ್ಲ.

ಸಂ: ದಲಿತ ಸಂಘರ್ಷ ಸಮಿತಿ ಜತೇನೂ ಯಾವುದೇ ಸಂಬಂಧ ಆಗಲಿಲ್ಲ.

ಶಾ: ಹೂಂ.. ಪ್ರತಿಯೊಂದು ಊರಲ್ಲೂನೂ ಕೃಷಿಕಾರ್ಮಿಕರು ಇವರೆಲ್ಲ ಯಾರ್ ಹೇಳಿ? ದಲಿತ್ರು ಹೌದಾ? ಅದೆಂಗ್ ಬರ್ತಾರೆ ನಮ್ ಜತಿಗ್? ಅದಿಕ್ಕೇ ಹೇಳಿದ್ದೇನಂತಂದ್ರೆ, ಆಯಾ ವರ್ಗದಿಂದಲೇ ಲೀಡರ್ಸ್ ಗಳನ್ನ ತಗೋಬೇಕು ನಾವು. ರೈತಸಂಘದ ಅಧ್ಯಕ್ಷರು, ಕಾರ್ಯದರ್ಶಿ ಎಲ್ಲಾ ದಲಿತ್ರನ್ನ ತಗೋಬೇಕು, ಒಬ್ಬ ಮುಸ್ಲಿಂನ ತಗೋಬೇಕು.. ಇವೆಲ್ಲ ನಮ್ಮಲ್ಲಿ ಇಲ್ವೇ ಇಲ್ಲ.

ಸಂ: ಅಲ್ಲಾ, ಮುಖಂಡರು ಯಾವ ಜಾತಿಯವರು ಅನ್ನೋದಕ್ಕಿಂತ ಸಂಘದ ಒಟ್ಟು ಅಜೆಂಡಾನೇ...

ಶಾ: ಅಜೆಂಡಾನ ಅವರನ್ನಿಟ್ಕೊಂಡೇ ಅವರಿಗೆ ಬೇಕಾದಂಗೆ ಡಿಸೈನ್ ಮಾಡಬೇಕು. ನಿಜಸ್ಥಿತಿ ಹೇಳಬೇಕು ಅಂದ್ರೆ, ರೈತಸಂಘ ಗ್ರಾಮಾಂತರ ಪ್ರದೇಶದ ರೈತಕೂಲಿಕಾರರಿಂದ ಹುಟ್ಲೇಇಲ್ಲ. ಅದೇ ಆಗಿರೋದು ತಪ್ಪು. ಶುಗರ್ ಫ್ಯಾಕ್ಟರಿಗಳು ಎಲ್ಲಿದ್ದೋ ಅಲ್ಲಿನ ಕಬ್ಬು ಬೆಳೆಗಾರರ ಸಂಘಗಳೇ ರೈತಸಂಘ ಆಗಿದ್ದು. ಎಲ್ಲೆಲ್ಲಿ ಕಬ್ಬು ಬೆಳೀತಿದ್ರೋ ಅಲ್ಲಿ ಮಾತ್ರ ಇವತ್ತಿಗೂ ರೈತ ಸಂಘಗಳಿರೋದು. ಬೇರೆ ಬೆಳೆಗಳ ಜನ ಸೇರ್ಲೇ ಇಲ್ಲ. ಎಲ್ಲೋ ಒಂದ್ ಚೂರ್‌ಚೂರ್ ಅಲ್ಲಲ್ಲಿ ಸೇರಿರ್ಬೋದು ಅಷ್ಟೇನೆ. ಅದ್ಕೆ ಪ್ರತೀಸಾರಿ ನಾನು ಹೇಳೋದು, ಒಂದ್ ಸಾರಿ ಇದನ್ನ ಡಿಸಾಲ್ವ್ ಮಾಡಿ ನಾವು ಹೊಸ

ಮ್ಯಾನಿಫೆಸ್ಟೋ ಬರೀಬೇಕು. ಅಧ್ಯಕ್ಷರನ್ನ ಮೊದ್ಲು ದಲಿತರನ್ನ ಇಟ್ಕೋಬೇಕು. ಮುಸ್ಲಿಮರು, ಅವರನ್ನಾ ಇವರನ್ನಾ ಪದಾಧಿಕಾರಿಗಳನ್ನ ಮಾಡಬೇಕು. ಮಾಡಿಕೊಂಡು ಅವರ ಹಿಂದೆ ನಾವು ಕುತ್ಕೊಂಡು ರೈತ್‌ಸಂಘ ಮ್ಯಾನಿಫೆಸ್ಟೋ ರೆಡಿಯಾಗ್ಬೇಕು. ಆಮೇಲೆ ಹೋರಾಟ ಪ್ರಾರಂಭ ಆಗ್ಬೇಕು.

ಸಂ: ಇದ್ಯಾಕೆ ಸಾಧ್ಯವಾಗಲಿಲ್ಲ?

ಶಾ: ನಂಜುಂಡ್ ಸ್ವಾಮಿ ಹೇಳೋದೇನು ಅಂದ್ರೆ 'ಅದು ನಾಟಕ ಆಗ್ತದೆ. ಪ್ರಾಮಾಣಿಕವಾಗಿ ಅನ್ಸಿದ್ರೆ ಅವರೇ ಬಂದ್ ಸೇರ್ಕೋಬೇಕು ಅಂತ'. ಆದರೆ ಅವರು ಹ್ಯಾಂಗ್ ಬಂದು ಸೇರ್ತಾರೆ? ಊರನಲ್ಲಿ ಒಬ್ಬ ಶೋಷಣೆ ಮಾಡೋ ಒಬ್ಬ ವ್ಯಕ್ತೀನೇ ಇದರ ಮುಖಂಡ ಆಗಿದ್ದಾಗ ಅವರು ಬರ್ತಾರೇನ್ರಿ? ಅವರ್‍ಯಾಕ್ ಬರ್ತಾರೆ? ಗುಮಾನಿಯಿಂದಾನೆ ನೋಡ್ತಾರೆ. ಇದು ನಂಜುಂಡ್‌ಸ್ವಾಮಿಗ್ ಅರ್ಥವಾಗಲ್ಲ. ಯಾಕೆ ಅಂದ್ರೆ ಅವರು ಹಳ್ಳೀಲ್ ಬೆಳೀಲೆ ಇಲ್ಲ, ಹಳ್ಳಿ ಗೊತ್ತಿಲ್ಲ ಅವ್ರಿಗೆ.

ಸಂ: ಈಗ ಎರಡನೇ ಸಲ ರೈತಸಂಘ ಒಡೆದಿದೆ.. ಎರಡೂ ಸಲ ಒಡೆಯೋದಕ್ಕೆ ಕಾರಣ ಎಲ್ಲಿದೆ? ಅದರ ಈವರ್ಗ ಸ್ವರೂಪದಲ್ಲಿ...?

ಶಾ: (ತೀಕ್ಷ್ಣ ದನಿಯಲ್ಲಿ) ಏನಿಲ್ಲಾ. ಇಲ್ಲಿ ವ್ಯಕ್ತಿಗತವಾಗಿ ತೆವಲುಗಳು. ಈಗ ಒಡೆದಿರೋದಕ್ಕೂ ನಂಜುಂಡ್‌ಸ್ವಾಮಿಯವರ ತೆವಲುಗಳೇ ಕಾರಣ; ಬಸವರಾಜ್, ಪುಟ್ಟಣ್ಣಯ್ಯ, ನಂಜುಂಡ್‌ಸ್ವಾಮಿ ಈ ಮೂರು ಜನರ ಮಧ್ಯ ನಡೆದಂಥಾ ಭಿನ್ನಾಭಿಪ್ರಾಯಗಳೇ. ಮೊದಲನೇ ಸಲ ಒಡೆದಿದ್ದಕ್ಕೆ ಕಾರಣ ನಂಜುಂಡ್‌ಸ್ವಾಮಿಗೂ ಬಾಬಾಗೌಡರಿಗೂ ನಡೆದಂತಹ ಪರ್ಸನಲ್ ಜಗಳ ಅಷ್ಟೆ.

ಸಂ: ರೈತಸಂಘದ ಕಾರ್ಯಕ್ರಮಗಳಿಗೆ ನಂಜುಂಡ ಸ್ವಾಮಿಯವರು ಸಾಮ್ರಾಜ್ಯಶಾಹಿ ವಿರೋಧಿ ಹೋರಾಟದ ಆಯಾಮ ಕೊಡ್ತಾ ಇದ್ರು...

ಶಾ: ನಿಜ, ಯಾರಿಲ್ಲ ಅಂತ್ತೇಳ್ತಾರೆ. ಆದರೆ, ನಿಜವಾದ ರೈತಸಂಘ ಕಟ್ಟಿಕೆ ನಮ್ಗೆ ಇನ್ನೂ ಯಾಕೆ ಆಗಿಲ್ಲ? ಇದಾಗದೆ ಸಾಮ್ರಾಜ್ಯಶಾಹಿ ವಿರುದ್ಧ ಹೋರಾಟ ತಗೊಂಡು ಹೋಗ್ತಾ ಇರೋದಿದೆಯಲ್ಲ ಅದು ಗಿಮಿಕ್ಸ್ ಆಗಿಬಿಡ್ತದೆ. ಅದಕ್ಕಿಂತ ಹೆಚ್ಚು ಇಲ್ಲಿ ನಡೀಬೇಕಾಗಿತ್ತು. ಇಲ್ಲೀದನ್ನ ಕಂಪ್ಲೀಟಾಗಿ ಬಿಟ್ ಬಿಡ್ತಾರವ್ರು. ಆದನ್ ಬಿಟ್ಟು ಪಬ್ಲಿಸಿಟಿ ಸಿಗುತ್ತಲ್ಲ ಅದನ್ನ ಮಾತ್ರ ಅವರು ಮಾಡೋದು. ಚುನಾವಣೆ ಬ್ಯಾಡ ರೈತಸಂಘಕ್ಕೆ ಅಂದಿವಿ. ಏನ್ಹೇಳಿದ್ರೂನೂ ಕೇಳಲಿಲ್ಲ. ಚುನಾವಣೆ ಬೇಕು ಅಂತ ಹೋಗಿ ಕಷ್ಟಾಪಟ್ಟು ಸಂಪಾದ್ಸಿದ ಎನರ್ಜಿನೆಲ್ಲ ಹಾಳ್ ಮಾಡೋದು.

ಸಂ: ರೈತ ಸಂಘದ ಒಡೆಯುವಿಕೆಯಲ್ಲಿ ಶಕ್ತಿರಾಜಕಾರಣದ ಪಾತ್ರ ಇಲ್ವಾ?

ಶಾ: ಪಾತ್ರಾ ಇದೆ. ಯಾಕಿಲ್ಲ? ಇದೆಲ್ಲ ಇಲ್ದೇನೆ ನಾವು ಹೋರಾಟ ಮಾಡ್ತಿದ್ರೆ, ನಮ್ ಸಂಘಟನೇನ ಚಳುವಳಿಯಾಗಿ ಇನ್ನೂ ಚೆನ್ನಾಗಿ ಬೆಳೆಸಬಹುದಾಗಿತ್ತು. ಇಲ್ಲಿ ಹೋರಾಟ ಮಾಡದೆ ಪ್ರಾಮಾಣಿಕವಾಗಿ ನೀವು ಬೆಳೆಯೋಕೆ ಸಾಧ್ಯಾನೇ ಇಲ್ಲ. ಇಲ್ದಿದ್ರೆ ಎಲ್ಲ ಕರಪ್ಪನಗಳನ್ನ ಮಾಡ್ಬೇಕಾಗ್ತದೆ.

ಸಂ: ಯಾವುದೇ ಚಳುವಳಿ ಚುನಾವಣಾ ರಾಜಕೀಯಕ್ಕೆ ಇಳಿದರೆ ಅದು ಚಳುವಳಿಯಾಗಿ ಇರೋಕೆ ಸಾಧ್ಯವಿಲ್ಲ ಅನ್ನೋದು ಮತ್ತೆಮತ್ತೆ ಸಾಬೀತಾಗ್ತಾ ಇದೆ.

ಶಾ: ಇಲ್ಲಿ ಪವರ್ ಇಲ್ದೆ ಏನೂ ಮಾಡೋಕಾಗಲ್ಲ, ಅನ್ನೋದು ಒಂದು ನಿಜ ಇರಬಹುದು. ಆದರೆ ಇಷ್ಟು ವರ್ಷದ ಅನುಭವದಂತೆ ಪ್ರಾಮಾಣಿಕವಾದ ಚುನಾವಣೆ ನಡೆಸೋಕೆ ನಮಗೆ ಆಗದೇ ಇರೋದ್ರಿಂದ, ನಮಗೆ ಹೋರಾಟಾನೇ ಅನಿವಾರ್ಯ. ಅದನ್ನ ಬಿಟ್ರೆ ಕಳ್ಕೋಬುಡ್ತಿವಿ ನಾವು.

ಸಂ: ದಲಿತ ಸಂಘರ್ಷ ಸಮಿತಿಗೂ...

ಶಾ: ಇದೇನೆ ಆಗಿದ್ದು. ಯಾರು ಚುನಾವಣೆಗೆ ಇಳಿದ್ರೂನೂ ಗೆಲ್ಲೋಕೆ ಈ ಭ್ರಷ್ಟಾಚಾರ ಮಾಡ್ಲೇಬೇಕಲ್ಲ? ಹಂಗಂದ್ಮೇಲೆ ನಿಮ್ ವಿಶ್ವಾಸ ಹೋಯ್ತು ಜನ್ರಲ್ಲಿ.

ಸಂ: ಮುಂದೆ ರೈತಸಂಘದ ದಿಕ್ಕು ಯಾವುದು?

ಶಾ: ಸದ್ಯಕ್ಕೆ ರೈತ್‌ಸಂಘದ್ ಸ್ಥಿತಿ ಏನಂದ್ರೆ ಎರಡು ಹೋಳಾಗಿರೋದು. ಏನಾರ ಮಾಡಿ ನಾವು ಮತ್ತೆ ಅದುನ್ ಸರಿಮಾಡ್ಕೋಬೇಕು. ಸರಿಮಾಡ್ಕೊಂಡು ಚುನಾವಣೆಗೆ ಇಳೀದಿದ್ದಹಾಗೆ ಕೆಲ್ಸ ಮಾಡ್ಬೇಕು.

ಸಂ: ಜಾಗತೀಕರಣದ ಪರಿಣಾಮಗಳು ಬಿರುಸಾಗ್ತಾ ಇರೋ ಈ ದಿನಗಳಲ್ಲೇ ಚಳುವಳಿಗಳು ದುರ್ಬಲ ಆಗಿವೆ. ಛಿದ್ರ ಆಗಿವೆ. ಮುಂದಿನ ದಿನಗಳಲ್ಲಿ ರೈತರ ಮೇಲೆ ಈ ಎರಡೂ ಬೆಳವಣಿಗೆಗಳು ಯಾವ ಪರಿಣಾಮ ತರಬಹುದು?

ಶಾ: ಮೊನ್ನೆ ತೇಜಸ್ವಿ ಹೇಳ್ತಾ ಇದ್ರು. 'ರೈತ್‌ಸಂಘ ರೈತ್‌ಸಂಘ ಅಂತೀದೀರಿ ನೀವು. ಎಲ್ಲಿದ್ದಾರೆ ರೈತರು? ಹಳ್ಳೀಲಿ ರೈತರು ಎಲ್ಲಿ ಉಳಿತಾರೆ? ಇಡೀ ಪ್ಯಾಟರ್ನೆ ಬದಲಾವಣೆ ಆಗ್ತಾ ಇದೆ. ನಿಮಗೇನಾರ ತಲೆಗಿಲೆ ನೆಟ್ಟಗೆ ಇದೆಯೇನ್ರಿ?' ಅಂತ ಕೇಳಿದ್ರು. ಅವರು ಹೇಳಿದ್ಮೇಲೆ ಯೋಚ್ನೆ ಮಾಡಿ ನೋಡಿದ್ರೆ, ಈಗ ಕೂಲಿಬೆಲೆ ದಿನಾ ಜಾಸ್ತಿಯಾಗ್ತಾಯಿದೆ. ಅದಾಗ್ಲೆಬೇಕು. ಹಾರ್ವೆಸ್ಟ್ ಮಿಶನ್ ಬಂದ್ರೆ ಜನರ ಕೈಗೆ ಕೆಲ್ಸ ಸಿಗೋದಿಲ್ಲ ಅಂತ ನಾವು ಹಿಂದೆ ಚಳುವಳಿ ಮಾಡ್ತಾ ಇದ್ವಿ. ಮೆಕ್ಯನೈಸ್ ಕಲ್ಟಿವೇಶನ್ನು ಎಲ್ಲೆಲ್ಲಿ ಆಗಿದೆಯೋ ಅಲ್ಲೆಲ್ಲ ಕೈಗೆ ಕೆಲ್ಸ ಇಲ್ಲಂಗೆ ಆಗಿರೋವಂತದ್ದನ್ನ ನೋಡಿದ್ದೀವಿ ನಾವು. ಈಗ ನೋಡಿದ್ರೆ ಹಾರ್ವೆಸ್ಟ್ ಮಾಡೋಕೆ ಜನಾ ಇಲ್ದೆ ಬತ್ತ ಉದುರಿ ಹೋಗ್ತಿದೆ! ವಿಪರ್ಯಾಸ ಅಂದ್ರೆ, ನೀವು ಬೇಕು ಅನ್ನಂಗಿಲ್ಲ ಬ್ಯಾಡ ಅನ್ನಂಗಿಲ್ಲ. ಪರಿಸ್ಥಿತಿ ನೋಡಿದ್ರೆ ಮಿಶನ್ನು ಅನಿವಾರ್ಯ ಆಗ್ಬಿಟ್ಟಿದೆಯಪ್ಪ. ಹಂಗಾಗಿ ಹಳ್ಳಿ ಒಳಗಡೆ ನಾನು ಮಾಡಿದಂತಹ ಸರ್ವೇ ಪ್ರಕಾರ ಏನಾಗಿದೆ ಅಂದ್ರೆ, ಹಳ್ಳೀಲಿ ಒಂದು ಗೂಡಂಗಡಿ ಇಟ್ಕೊಂಡವನು 'ನಾ ರೈತ ಅಲ್ಲ, ನಾ ರೈತ ಸಂಘಕ್ಕೆ ಬರಲ್ಲಾ' ಅಂತಾನೆ. ರೈತ ಯಾರಪ್ಪ ಅಂತೇಳಿದ್ರೆ ಭೂಮಿ ಇದ್ದಂವ ಮಾತ್ರ. ಇವರು ನಿಮಿಗೊಂದ್ ಒಂಪರ್ಸೆಂಟ್ ಸಿಗ್ತಾರೆ. ಇನ್ನುಳಿದವರು ಯಾರೂ ರೈತ್ ಸಂಘಕ್ಕೆ ಸೇರೋಕೆ ಸಾಧ್ಯವೇ ಇಲ್ಲ. ಜನರೇ ಇಲ್ಲದೆ ಸಂಘಟನೆ ಏನ್ಮಾಡ್ತೀರಿ?

ಸಂ: ಬೇವು ಅರಿಸಿಣ ತುಳಸಿ ಇವುಗಳ ಪೇಟೆಂಟ್ ವಿರುದ್ಧ ರೈತಸಂಘದ ವಿರೋಧ ಇದೆ. ಜಾಗತೀಕರಣದಿಂದ ರೈತರ ಮೇಲೆ ನಿಜವಾಗಿಯೂ ಎಂಥಾ ಪರಿಣಾಮ ಆಗ್ತಿದೆ?

ಶಾ: ನಮಗೆ ಅನಿಸ್ತಾ ಇರೋದು ಇಷ್ಟೇನೆ. ಬತ್ತಾನೋ ಜೋಳಾನೊ ಬೀಜಕ್ಕೆ ನಾವು ನಿಮ್ಮತ್ರ ಇಸ್ಕೋಂತಿದ್ವಿ. ನನ್ ಹತ್ರ ನೀವ್ ಇಸ್ಕೊಂತಾಯಿದ್ರಿ. ಪ್ರತಿಯೊಬ್ಬ ರೈತರೂ ಬೀಜಾನ ಮನೆಯಲ್ಲಿ ಒಡಿದಿಡ್ತಾ ಇದ್ರು. ಈಗೇನಾಗಿದೆ? ಒಬ್ಬನೇ ಒಬ್ಬ ರೈತ ಬೀಜಾನ ಇಟ್ಟಿರೋದ್ ಇದೆಯಾ? ಅವರು ಕೊಡೋ ಬೀಜ ಉತ್ತಮ ಇಲ್ಲ ಅಂದಾಗ. ಸಾರಾಸಗಟ್ ನಾವು ಹಾಳಾಗ್ ಹೋಗ್ತೀವಿ. ಈ ಪೇಟೆಂಟ್ ವ್ಯವಹಾರಾನೂ ಹಂಗೆ ಆಗ್ತದೆ. ಇದುನ್ ನಾವೀಗ ಬಳಸ್ತಾ ಇದೀವಿ ಹೌದಾ? ನಿಧಾನಕ್ಕೆ ಅವ್ರೇ ಎಲ್ಲ ಸಪ್ಲೇ ಮಾಡೋಕೆ ಶುರುಮಾಡ್ತಾರೆ ನಾಳೆ. ಸಿದ್ಧವಸ್ತುಗಳನ್ನ ಅವರು ಕೊಡೋಕ್ ಶುರುಮಾಡ್ತಾರೆ. ಆಗ ನಾವು ನಮ್ಮ ಬೆಳೆಗಳ ಕಡೆ ನಿಗಾ ಬಿಟ್ ಬಿಡ್ತೀವಿ. ಆಮೇಲೆ ಇದ್ ನಮ್ದು ಅಂತ ಹೇಳ್ತಾರೆ. ಈಗ ಸಹಜವಾಗಿ ಬೆಳ್ದಿರೋ ಬೀಜವೆಲ್ಲ ಹೋಬಿಡ್ತಾವೆ. ಈಗ ಅವಿಲ್ಲೇ ಇಲ್ಲ. ಯಾಕಂತಂದ್ರೆ, ಅವ್ರು ಕೊಟ್ಟಿದ್ದನ್ನ ತಂದ್ ಅಭ್ಯಾಸವಾಗಿದೆ. ಮೊದ್ಲು ಎಲ್ಲದ್ನು ಕೊಟ್ಟಿಂಗ್ ಮಾಡಿ, ಬರ್ತ್‌ಬರ್ತಾ ಅವರಿಗ್ ಬೇಕಾದ್ನೆ ಕೊಡಂಗ್ ಮಾಡಿದ್ರು. ಈಗ ನೋಡಿ ಈ ಮುಸ್ಕಿನ್ ಜೋಳ ಇದೆಯಲ್ಲ ಇವನ್ನೆ ಯಾರ್ ಬೆಳಿಸ್ಕೊಂಡ್ ಹೋಗ್ತಿದಾರೆ? ಅವರಿಗೆ ಅದು ಬೇಕಾಗಿದೆ. ತಿನ್ನೋ ಜೋಳದ ತಳೀಗಳೇ ಇಲ್ವಾರಿ ಇವತ್ತು! ವಾಣಿಜ್ಯ ಬೆಳೆ ವಾಣಿಜ್ಯ ಬೆಳೆ ಅಂತ ಹೇಳ್ತಾರೆ ಅಷ್ಟೇ ಹೊರ್ತು, ನಿಜವಾಗ್ಲೂ ಅದು ಲಾಭದಾಯಕ ಅಲ್ಲ. ಹಿಂದೆ ಏನಾಗಿತ್ತು? ರೈತರು ಒಂದೇ ಬೆಳೆ ಬೆಳೀತಿರ್ಲಿಲ್ಲ. ಬತ್ತ, ರಾಗಿ, ಜೋಳ, ನವಣೆ ತಮ್ ಕುಟುಂಬಕ್ ಬೇಕಾದ್ದು ಎಲ್ಲಾನೂ ಬೆಳ್ಕೋತಿದ್ದರು. ಮಾರಾಟ ಆಗ್ಲೀ ಇದ್ರೂನು ತಿನ್ನೋದುಕಾದ್ರು ಸಮೃದ್ಧಿಯಾಗಿ ಸಿಗ್ತಿತ್ತು. ಈಗ ತಾನು ಬೆಳ್ದಿದ್ದನ್ನು ತಿನ್ನೋಕೆ ಆಗೋದಿಲ್ಲ. ಮಾರಬೇಕು, ಬಂದ್ ರೊಕ್ಕದಲ್ಲಿ ತಿನ್ನೋದನ್ನ ಕೊಂಡ್ಕೋಬೇಕು. ನೋಡ್ತಿರಿ, ಲಾಭದಾಯಕ ಬೆಲೆ ಸಿಗ್ತದೆ ಅಂತಿಳ್ಕೊಂಡೋರೆಲ್ಲಾ ದಿವಾಳಿ ಆಗೋಯ್ತರೆ. ಇದರಲ್ಲಿ ಸಣ್ ರೈತರಂತೂ ಉಳಿಯೋದೇ ಇಲ್ಲ.

ಸಂ: ರೈತಚಳುವಳಿಗೆ ಈಗ ಜಗತ್ತಿನ ರೈತರ ಸಂಪರ್ಕ ಬೇಕು, ಅದಕ್ಕೆ ಅಂತಾರಾಷ್ಟ್ರೀಯ ಆಯಾಮ ಬೇಕು ಅಂತ ನಂಜುಂಡಸ್ವಾಮಿಯವರ ಮಾತಿಗೆ ನಿಮ್ಮ ಪ್ರತಿಕ್ರಿಯೆ?

ಶಾ: ನಾವ್ ಹೇಳೋದು ಅಂತಾರಾಷ್ಟ್ರೀಯ ಆಯಾಮ ಮುಖ್ಯವೇ. ಆದ್ರೆ ಅದಕ್ಕೆ ಎಷ್ಟು ಗಮನ ಕೊಡ್ಬೇಕೋ ಅಷ್ಟು ಕೊಡ್ಬೇಕು. ಅದಬಿಟ್ಟು 'ಫಾರಿನ್ನಿಗೆ ಐನೂರ್ ಜನ ಕರ್ಕೋದೆ ಸಾವಿರ ಜನ ಕರ್ಕೋದೆ ಅಂದ್ರೆ'? ಅದಕ್ಕೇ ನಮ್ ಶಕ್ತಿ ಪೂರಾ! ಇಲ್ಲಿ ಗ್ರಾಮಮಟ್ಟದಲ್ಲಿ ಸಂಘಟನೆಯಿಲ್ಲ. ಒಂದು ಮೆಂಬರ್ ಶಿಪ್ ಇಲ್ಲ. ೭೫ ಭಾಗ ಇಲ್ಲಿ ಕೊಡ್ಬೇಕು ೨೫ ಭಾಗ ಅಲ್ಲ್ ಕೊಡ್ಬೇಕು. 'ರೈತಸಂಘದ ಕೂಪಮಂಡೂಕಗಳಿಗೆ ರಿಪೇರಿ ಮಾಡೋಕಾಗಿ ವಿದೇಶ ತೋರಿಸಬೇಕಾಗಿದೆ ನಾವು.. ಅದಕ್ಕೇ ಕರ್ಕೊ

ಹೋಗ್ತೀನಿ' ಅಂತ ಹೇಳಿದ್ದಾರೆ. ಅದಕ್ಕೆ ನಾ ಬರೆದೆ: 'ನಾನು ಕೂಪಮಂಡೂಕ ಅಲ್ಲ. ನನಿಗೆ ವಿದೇಶ ಪ್ರವಾಸದ ಅವಶ್ಯಕತೆ ಇಲ್ಲ'.

ಸಂ: ನಂಜುಂಡಸ್ವಾಮಿಯವರ ವ್ಯಕ್ತಿಪ್ರತಿಷ್ಠೆ ಹಠಮಾರಿತನದಿಂದ ಹಿಂಗಾಗ್ತಾ ಇದೆ ಅನ್ನೋ ಅಭಿಪ್ರಾಯವಿದೆ.

ಶಾ: ನನ್ನ ಅವರ ೪೨ ವರ್ಷದ ಸ್ನೇಹದಿಂದ ಹೇಳ್ತಿದೀನಿ ನಾನು, ಇದು ಸೆಂಟ್ ಪರ್ಸೆಂಟ್ ನಿಜ. ನೀವ್ ಯಾರ್ನಾರಾ ಕೇಳಿ, ತೇಜಸ್ವಿ ಅಂತ್ಹೋರನ್ನ ಬೇಕಾರೆ ಕೇಳ್ರಿ. 'ನಂಜುಂಡ್ ಸ್ವಾಮಿನಾ? ಮಾರಾಯರಾ. ನಾ ಕೈ ಮುಗೀತೀನಿ' ಅಂತಾರೆ.

ಸಂ: ರೈತಸಂಘ ತನ್ನ ದೋಷಗಳನ್ನ ಅರಿತು, ತಿದ್ದಿಕೊಂಡು ಮತ್ತೊಮ್ಮೆ ಹೊಸರೂಪದೊಂದಿಗೆ ಎದ್ದು ಬರೋದು ಸಾಧ್ಯ ಇದೆಯಾ?

ಶಾ: ನನಿಗೆ ರೈತ್ ಸಂಘ ಮತ್ತೆ ಹೊಸ್ತಾಗಿ ಒಂದು ಫೋರ್ಸಾಗಿ ಬೆಳೀತದೆ ಅಂತ ವಿಶ್ವಾಸ ಇಲ್ಲ. ಅದರ ಆಯಷ್ಯ ಅಷ್ಟೇ ಅಂತ ಅನ್ಸುತ್ತೆ. ಯಾಕಂದ್ರೆ, ಎಲ್ಲ ವಿಶ್ಲೇಷಣೆ ಮಾಡಿ ನಾವು ಒಪ್ಕೊಂಡಿರೋ ಸತ್ಯ ಇದು. ಭೂಮಿ ಇರೋವ್ರು ತಮ್ಮ ಒಳಗಿರೋ ತಪ್ಪುಗಳ್ನ ಒಪ್ಕೊಂತಾ ಹೋಬೇಕು. ಕಾರ್ಮಿಕರ ಸುಖ-ಕಷ್ಟಗಳನ್ನ ರಿಪೇರಿ ಮಾಡೋದು ನನ್ನ ಕರ್ತವ್ಯ ಅಂತ ಅನ್ಸಿದ್ರೆ ಮಾತ್ರ ಈ ಸಂಘಟನೆ ಬೆಳೀತದೆ. 'ಅವನ ಕೂಲಿಗಾಗಿ ನಾನೆಂಗ್ ಹೋರಾಟ ಮಾಡ್ಲಿ? ಅವನ್ ಮಾಡ್ಬೇಕು. ನನಿಗೆ ವೈಜ್ಞಾನಿಕವಾದ ಬೆಲೆ ಬಂದ್ರೆ ಮಾತ್ರ ನಾ ಅವನಿಗೆ ವೈಜ್ಞಾನಿಕ ಕೂಲಿ ಕೊಡ್ತೀನಿ. ಇಲ್ದಿದ್ರೆ ಇಲ್ಲ' ಅಂದ್ರೆ, ಮತ್ತೆ ಎರಡ್ ಯೋಚ್ನೆ ಮಾಡ್ಬಂಗಾಯ್ತಾ ನಾವು?. 'ನಮ್ಮಿಬ್ಬರ ಸಮಸ್ಯೆಗೆ ಒಟ್ಟಿಗೆ ಹೋರಾಟ ಮಾಡೋಣ' ಅಂತ್ಹೇಳಿ ಹೋಬೇಕು. ಇದಕ್ಕೆ ನಮ್ಮಲ್ಲಿ ಯಾರೂ ತಯಾರಿಲ್ಲ. ಹ್ಯಂಗ್ ಬೆಳೀತದೆ ಸಂಘಟನೆ? ನನಗನ್ಸುತ್ತೆ ರೈತಸಂಘದಿಂದ ಎಷ್ಟ್ ಕೆಲ್ಸಾ ಆಬೇಕಾಗಿತ್ತೊ ಅಷ್ಟ್ ಆಗೋಗಿದೆ. ಇನ್ನು ಈ ರೈತ್ ಸಂಘದ ರಿಪೇರಿಯಿಂದ ಉಪಯೋಗ ಇಲ್ಲ. ಅದ್ಕೇ 'ಇದು ಸತ್ತೋಗ್ ಬಿಡ್ಲಿ' ಅಂತ ಅನ್ನೋದು. ಯಾರಾದ್ರು ಬಂದು ಹೊಸ್ತು ಹುಟ್ಟಾಕುದ್ರೆ ಒಳ್ಳೇದಲ್ವಾ? ಒಂದು ಹೊಸಾ ಚೈತನ್ಯ ಬರೋದಿಕ್ಕೆ ನಾವ್ ಅಡ್ಡಬರಬಾರ್ದು. ಸಮಸ್ಯೆಗಳು ಇದ್ದೇ ಇವೆಯಲ್ಲಪ್ಪ ಈಗ. ಪರಿಸರದ್ದು ಸಮಸ್ಯೆ ಇದೆ. ಬಹುರಾಷ್ಟ್ರೀಯರ ಶೋಷಣೆ ಸಮಸ್ಯೆ ಇದೆ. ದಲಿತರನ್ನ, ಮುಸಲ್ಮಾನರನ್ನ, ರೈತರನ್ನ, ವ್ಯಾಪಾರಸ್ಥರನ್ನ, ಅನ್ಯಾಯದಲ್ಲಿರೋ ಎಲ್ಲ ವರ್ಗದವರನ್ನ ಒಟ್ಟಿಗೆ ತಗೊಂಡು, ಒಂದು ಹೊಸ ಹೋರಾಟ ಹುಟ್ಟಬೇಕು. ಅದಕ್ಕೆ ಅಡ್ಡ ನಿಲ್ಲಬಾರ್ದು ಯಾರೂವ. ರೈತ್ ಸಂಘ ಸತ್ತು ಹೋದ್ರೆ ಹೋಗ್ಲಿ ಬೇಕಾದ್ರೆ. ಅಡ್ಡಿಯಿಲ್ಲ. ಚರಿತ್ರೇಲಿ ನಾವು ಅದುನ್ನಾರ ಆಸೆ ಪಡ್ಬೇಕು ಅಂತ ನಾ ಹೇಳೋದು.

ಬರಹರೂಪ: ಜಿ. ಶಂಕರ್

ಪರಿಚಯ

## 'ಎ ಕಂಪೇರೆಟಿವ್ ಗ್ರಾಮರ್ ಆಫ್ ದ ದ್ರವಿಡಿಯನ್ ಲಾಂಗ್ವೇಜಸ್'

● ಮಾಧವ ಪೆರಾಜೆ

'ಎ ಕಂಪೇರೆಟಿವ್ ಗ್ರಾಮರ್ ಆಫ್ ದ್ರವಿಡಿಯನ್ ಲಾಂಗ್ವೇಜಸ್ ಆರ್ ಸೌತ್ ಇಂಡಿಯನ್ ಫ್ಯಾಮಿಲಿ ಆಫ್ ಲಾಂಗ್ವೇಜಸ್' ಎಂಬ ದೀರ್ಘ ಶೀರ್ಷಿಕೆಯುಳ್ಳ ಈ ಕೃತಿಯು ಹೆಸರಲ್ಲಿ ಮಾತ್ರವಲ್ಲ ಗಾತ್ರದಲ್ಲಿಯೂ ೬೪೦ ಪುಟಗಳಷ್ಟು ದೀರ್ಘವಾಗಿದೆ. ರೆವರೆಂಡ್ ರಾಬರ್ಟ್ ಕಾಲ್ಡ್‌ವೆಲ್ಲನೆಂಬ ಪಾದ್ರಿ ರಚಿಸಿದ. ಈತನ ತಂದೆ ತಾಯಿಯರು ಸ್ಕಾಚ್ ದೇಶದವರು. ಕಾಲ್ಡ್‌ವೆಲ್ ಉತ್ತರ ಐರ್ಲೆಂಡಿನಲ್ಲಿ ೧೮೧೪ ಮೇ ೭ರಂದು ಜನಿಸಿದವನು. ತನ್ನ ೨೦ನೇ ವಯಸ್ಸಿನಲ್ಲಿ ಲಂಡನ್ನಿನ ಪ್ರಾಟೆಸ್ಟೆಂಟ್ ಕ್ರೈಸ್ತ ಮಿಶನರಿಗೆ ಸೇರಿದ ಈತ ೧೮೩೮ರಲ್ಲಿ ಭಾರತಕ್ಕೆ ಬಂದ ಕಾಲ್ಡ್‌ವೆಲ್ ಆಗಸ್ಟ್, ೧೮೯೧ರಲ್ಲಿ ಮರಣ ಹೊಂದಿದನು. ಈ ಗ್ರಂಥವು ೧೮೫೬ರಲ್ಲಿ ಮೊದಲ ಬಾರಿಗೆ ಪ್ರಕಟವಾಯಿತು. ೧೮೫೭ ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮ ನಡೆದ ಕಾರಣಕ್ಕಾಗಿ ಚಾರಿತ್ರಿಕ ಮಹತ್ವವನ್ನು ಪಡೆದಿದೆ. ಅದರ ಹಿಂದಿನ ವರ್ಷ ಭಾಷೆಯ ಜಗತ್ತಿನಲ್ಲಿ ಬೌದ್ಧಿಕವಾದ ಒಂದು ಕ್ರಾಂತಿಕಾರಕ ಘಟನೆ ನಡೆಯಿತು. ಅದೇನೆಂದರೆ ಮೊದಲ ಬಾರಿಗೆ, "ದ್ರಾವಿಡ ಭಾಷೆಗಳು ಸಂಸ್ಕೃತ ಭಾಷೆಯಿಂದ ಅಥವ ಆರ್ಯನ್ ಭಾಷೆಗಳಿಂದ ಜನ್ಯವಾದುವುಗಳಲ್ಲ." ಎಂದು ವಾದಿಸುತ್ತ ಕಾಲ್ಡ್‌ವೆಲ್ ದಕ್ಷಿಣ ಭಾರತೀಯ ಭಾಷೆಗಳ ವೈಶಿಷ್ಟ್ಯವನ್ನು ಪ್ರತಿಪಾದಿಸಿದನು. ಆ ಮೂಲಕ 'ದ್ರಾವಿಡ ಧ್ವನಿಶಾಸ್ತ್ರ'ಕ್ಕೆ ಕದಲಿಸಲಾಗದ ಬುನಾದಿಯನ್ನು ಹಾಕಿದನು.

ಈ ಪುಸ್ತಕದಲ್ಲಿ ೧೫೪ ಪುಟಗಳಷ್ಟು ದೀರ್ಘ ಪ್ರಸ್ತಾವನೆಯಿದ್ದು, ಅದರಲ್ಲಿ ಪ್ರತಿಯೊಂದು ದ್ರಾವಿಡ ಭಾಷೆಯ ಇತಿಹಾಸದ ಬಗೆಗಿನ ಚರ್ಚೆಯಿದೆ. ಮುಂದೆ ಧ್ವನಿಮಾಗಳು, ಧಾತುಗಳೂ, ನಾಮಪದಗಳು, ಸಂಖ್ಯಾವಾಚಿಗಳು, ಸರ್ವನಾಮ, ಕ್ರಿಯಾಪದಗಳು, ಹಾಗೂ ಅನುಬಂಧಗಳು ಎಂದು ಏಳು ಅಧ್ಯಾಯಗಳಿವೆ. ಈ ಎಲ್ಲ ಅಧ್ಯಾಯಗಳಲ್ಲಿ ಕಾಲ್ಡ್‌ವೆಲ್ ಈ ಎಲ್ಲ ಭಾಷೆಗಳ ವೈಶಿಷ್ಟ್ಯವನ್ನು ಪ್ರತಿಪಾದಿಸುತ್ತ ಅವುಗಳ ನಡುವೆ ಇರುವ ಸಾಮಾನ್ಯ ಸೂತ್ರವೊಂದನ್ನು ವಿಶದೀಕರಿಸುತ್ತಾನೆ. ತನ್ನ ಈ ಮಹತ್ವದ ಬೌದ್ಧಿಕ ಪಯಣದಲ್ಲಿ ಆತ ಪ್ರತಿಯೊಂದು ಧ್ವನಿಮಾಗಳ ಚರಿತ್ರೆಯನ್ನು ಬರೆಯುವುದು ದಂಗುಬಡಿಸುವ ಬೌದ್ಧಿಕ ಸಾಹಸವಾಗಿದೆ. ಕೇವಲ ದ್ರಾವಿಡ ಭಾಷೆಗಳ ತುಲನೆಯಷ್ಟೇ ಇಲ್ಲಿ ಮುಖ್ಯವಾಗದೆ ಒಂದೊಂದು ಧ್ವನಿಮಾವನ್ನು ಹಿಡಿದುಕೊಂಡು ಜಗತ್ತಿನಾದ್ಯಂತ ಇರುವ ಭಾಷೆಗಳೊಂದಿಗೆ ಅವುಗಳನ್ನು ಚರ್ಚಿಸುತ್ತಾನೆ. ಉದಾ: ಆತನ ಪ್ರಕಾರ 'ನೀ' ಎಂಬುದು ದ್ರಾವಿಡ ಭಾಷೆಗಳಲ್ಲಿ ಅತೀ ಪ್ರಾಚೀನವಾದ

ಪ್ರಕೃತಿರೂಪ (base) ಅದಾಗಿದ್ದು ಸಂಸ್ಕೃತದಲ್ಲಿ ಇಲ್ಲದಿರುವ ಇದು ಗ್ರೀಕ್ ಭಾಷೆ 'ನೆ-ಓ'ಗೆ (ne-o) ಸಂವಾದಿಯಾದುದು. ಕಾಲ್ಡ್‌ವೆಲ್ಲನ ಅನ್ವೇಷಣೆ ಎಷ್ಟು ಸೂಕ್ಷ್ಮವಾದುದೆಂಬುದನ್ನು ವಿವರಿಸುವ ಒಂದು ಉದಾಹರಣೆಯಿದು. ಕನ್ನಡವೇ ಮೊದಲಾದ ಅಷ್ಟೇ ಏಕೆ ಕೊಡವ ಭಾಷೆಗೂ ಸಂಬಂಧಿಸಿದಂತೆ ಅನೇಕ ವಿವರಣೆಗಳು ಈ ಗ್ರಂಥದಲ್ಲಿವೆ. ಮಿಶನರಿಯೋರ್ವನು ೧೯ನೇ ಶತಮಾನದ ಯುದ್ಧಗ್ರಸ್ಥ ದಿನಗಳಲ್ಲಿ ದಕ್ಷಿಣ ಭಾರತದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಈ ಕೃತಿ ರಚಿಸಿದ ಬಗೆ ನೆನೆಸಿಕೊಂಡಾಗ ಸೋಜಿಗ ತರಿಸುತ್ತದೆ.

ಕನ್ನಡದ ವ್ಯಾಕರಣದ ಮಟ್ಟಿಗೆ ಹೇಳುವುದಿದ್ದರೆ ಡಿ.ಎನ್. ಶಂಕರ ಭಟ್ಟರ ಕೃತಿಗಳು (ಅದರಲ್ಲಿಯೂ ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ) ಬಂದಮೇಲೆ ಒಂದು ತಿರುವು ಸಿಕ್ಕಂತಾಗಿದೆ. ನಾವೀಗ ಸಂಸ್ಕೃತ ಪರಂಪರೆಯನ್ನುಳಿದ ಕನ್ನಡ ವ್ಯಾಕರಣಗಳ ಕಡೆಗೆ ಹೋಗುತ್ತಿದ್ದೇವೆ. ಆದರೆ ಇದನ್ನು ಕಾಲ್ಡ್‌ವೆಲ್ ೧೮೫೬ರ ಕಾಲಕ್ಕೆ ಆರಂಭಿಸಿದ್ದ. ಹಾಗಾದುದರಿಂದ ಕಾಲ್ಡ್‌ವೆಲ್ಲನನ್ನು ಓದಿದವರಿಗೆ ಶಂಕರ ಭಟ್ಟರ ಪ್ರಯತ್ನ 'ಆದಿ'ಯಲ್ಲ ಅಂದೆನಿಸಿದರೆ ತಪ್ಪಲ್ಲ. ಕಾಲ್ಡ್‌ವೆಲ್ ದ್ರಾವಿಡ ಭಾಷೆಗಳ ಸಾಮ್ಯತೆಯನ್ನು ಹೇಳುತ್ತ ಅವುಗಳ ವೈಶಿಷ್ಟ್ಯವನ್ನು ಪ್ರತ್ಯೇಕವಾಗಿಯೇ ಈ ಗ್ರಂಥದಲ್ಲಿ ಚರ್ಚಿಸಿದ್ದಾನೆ. ಸಾಮಾನ್ಯವಾಗಿ ಕಾಲ್ಡ್‌ವೆಲ್, ದ್ರಾವಿಡ ಭಾಷೆಗಳು ಆರ್ಯನ್ ಭಾಷೆಗಳಿಗಿಂತ ಸಂಪೂರ್ಣವಾಗಿ ಭಿನ್ನವಾದುವುಗಳೆಂದು ಪ್ರತಿಪಾದಿಸಿದ ಎಂಬ ಮೂಢನಂಬಿಕೆಯಿದೆ. ಆದರೆ ಎಂದೂ ಆತ ಹಾಗೆ ಹೇಳಿಲ್ಲ. ದ್ರಾವಿಡ ಭಾಷೆಗಳಲ್ಲಿರುವ ಸಂಸ್ಕೃತದ ಪ್ರಭಾವವನ್ನು ಆತ ಅಲ್ಲಗಳೆದಿಲ್ಲ. ಕಾಲ್ಡ್‌ವೆಲ್ಲ ಪ್ರತಿಪಾದಿಸಿರುವುದು ಈಗ ಮೂಲೆಗುಂಪಾಗಿದೆ ಎಂದೆನ್ನುವ ಒಂದು ವರ್ಗವೂ ಇದೆ. ಆದರೆ ೧೯೭೪ರಲ್ಲಿ ಪ್ರಕಟವಾದ ಮೂರನೆಯ ಆವೃತ್ತಿಯಲ್ಲಿ ತೀರಾ ಅನುಮಾನಾಸ್ಪದವಾಗಿರುವ ಅನೇಕ ಪ್ರತಿಪಾದನೆಗಳನ್ನು ಕೈಬಿಡಲಾಗಿದೆ. ಹಾಗಾದುದುರಿಂದ ಈ ಅಪಾದನೆಯಲ್ಲಿ ಹುರಳಿಲ್ಲ.

ಕಾಲ್ಡ್‌ವೆಲ್ಲನ ಈ ಗ್ರಂಥವು ಕೇವಲ ವ್ಯಾಕರಣಾಸಕ್ತರಿಗೆ ಮಾತ್ರ ಉಪಯೋಗವಾದುದೆಂದರೆ ಅದರ ಮಹತ್ವವನ್ನು ಇಳಿಕೆಗೈಯ್ದಂತಾಗುತ್ತದೆ. ಒಂದು ಶಾಸ್ತ್ರೀಯ ಕೃತಿಯನ್ನು ಹೇಗೆ ಬರೆಯಬೇಕೆಂಬುದಕ್ಕೂ (ಯಾವ ಅಧ್ಯಯನ ಕ್ಷೇತ್ರದಲ್ಲೇ ಆಗಲಿ) ಅದು ಕೈಪಿಡಿಯಾಗಿದೆ. ಸಾಮಾನ್ಯವಾಗಿ ನಮ್ಮ ಇಂದಿನ ಅಧ್ಯಯನಗಳಲ್ಲಿ-'ಇಂತಹ' ವಿಚಾರವನ್ನು 'ಇದನ್ನು' ಓದಿದವರಿಗೆ ತಿಳಿಯುತ್ತದೆ-ಎಂಬ ಬೀಸು ಹೊರೆಯಿರುತ್ತದೆ. ಕಾಲ್ಡ್‌ವೆಲ್ ಎಂದೂ ಹಾಗೆ ಮಾಡುವುದಿಲ್ಲ. ಅಂತಹವರು ಏನು ಹೇಳಿದ್ದಾರೆ ಎಂಬುದನ್ನು ಮೊದಲು ವಿವರಿಸಿ, ಅಮೇಲೆ ತನ್ನ ಅಭಿಪ್ರಾಯವನ್ನು ಮಂಡಿಸುತ್ತಾನೆ. ಈಗಾಗಲೇ ಪ್ರತಿಪಾದಿಸಿದ ವಿಷಯಗಳು ಇನ್ನೊಂದು ಅಧ್ಯಾಯದಲ್ಲಿ ಮುಂದುವರಿದಾಗ ಸಂಕ್ಷಿಪ್ತವಾಗಿ ಅದನ್ನು ಮತ್ತೊಮ್ಮೆ ಮುಂದಿಟ್ಟು ಅನಂತರ ಮುಂದುವರಿಯುತ್ತಾನೆ. ಸಾಮಾನ್ಯವಾಗಿ ನಮ್ಮ ಅಧ್ಯಯನಗಳು ನಿಗಮನ, ಇಲ್ಲ ಅನುಗಮನ ಮಾದರಿಯನ್ನು ವಿಶ್ಲೇಷಣೆಯಲ್ಲಿ ಅನುಸರಿಸುತ್ತವೆ. ಆದರೆ ಕಾಲ್ಡ್‌ವೆಲ್ ಏಕಕಾಲಕ್ಕೆ ಇವೆರಡನ್ನು ಅನುಸರಿಸಿದ ಮೂರನೆಯ ಮಾದರಿಯೊಂದನ್ನು ಗ್ರಂಥದುದ್ದಕ್ಕೂ ಅನುಸರಿಸುತ್ತಾನೆ. ಅಧ್ಯಯನ ವಿಧಾನ (Methodology) ಕ್ಲೀಷೆಯಾಗಿರುವ ಇಂದಿನ ದಿನಗಳಲ್ಲಿ ಯಾವ ಅಧ್ಯಯನ ಶಾಖೆಯವರಾದರೂ ಈ ವಿಧಾನವನ್ನು ಅನುಸರಿಸಬಹುದಾಗಿದೆ.

# ಕರ್ನಾಟಕ ಬುಡಕಟ್ಟು ಅಧ್ಯಯನ

● ಎಸ್. ಪ್ರಭಾಕರ

ಬುಡಕಟ್ಟುಗಳು, ಜನಾಂಗಗಳು ಹಾಗೂ ಭಾಷಿಕ ಸಮುದಾಯಗಳನ್ನು ಕುರಿತು ಕನ್ನಡದಲ್ಲಿ ನಡೆದಿರುವ ಅಧ್ಯಯನಗಳಿಗೆ ಒಂದು ನೂರು ವರ್ಷಗಳ ಇತಿಹಾಸವಿದ್ದಂತೆ ಕಾಣುತ್ತದೆ. ಎಚ್.ವಿ.ನಂಜುಂಡಯ್ಯನವರು ೧೯೦೬ರಲ್ಲಿಯೇ ಸಮುದಾಯಗಳ ಅಧ್ಯಯನ ಕೈಗೊಂಡಿರುವುದು ಕಾಣಬರುತ್ತದೆ. ಅಲ್ಲಿಂದ ಮುಂದೆ ಮೈಸೂರು ಸಂಸ್ಥಾನದ ಅರಸರ ವಿಶೇಷ ಪ್ರೋತ್ಸಾಹದಿಂದ ಅನಂತಕೃಷ್ಣ ಅಯ್ಯರ್ ಸಹ ಸಮುದಾಯಗಳನ್ನು ಅಧ್ಯಯನ ಮಾಡಿದ್ದಾರೆ. ೧೯ನೇ ಶತಮಾನದಲ್ಲಿ caste and Tribes of Southern India ಮಾಲಿಕೆಯನ್ನು ಪ್ರಕಟಿಸಿದ ಎಡ್ಗರ್ ಥರ್‌ಸ್ಟನ್ ಕಾಲದಿಂದ ಇಂದಿನವರೆಗೂ ಸಮುದಾಯಗಳ ಅಧ್ಯಯನಗಳು ನಡೆದು ಬಂದಿವೆ. ಈ ಅಧ್ಯಯನಗಳನ್ನು ಸ್ಥೂಲವಾಗಿ ಈ ಮೂರು ಭಾಗಗಳಾಗಿ ವಿಂಗಡಿಸಬಹುದು.

೧. ವಸಾಹತುಶಾಹಿ ಕಾಲಘಟ್ಟ

೨. ವಸಾಹತ್ತೋತ್ತರ ಕಾಲಘಟ್ಟ

೩. ಇತ್ತೀಚಿನ ಅಧ್ಯಯನಗಳು

ವಸಾಹತುಶಾಹಿ ಕಾಲಘಟ್ಟದಲ್ಲಿ ಸಮುದಾಯಗಳ ಅಧ್ಯಯನಗಳು, ವಸಾಹತು ಆಡಳಿತದ ಒಂದು ಭಾಗವಾಗಿಯೇ ಪ್ರಾರಂಭವಾದವು. ಭಾರತವನ್ನು ಆಳುವುದಕ್ಕೆ ವಸಾಹತುಶಾಹಿಗಳಿಗೆ, ಈ ದೇಶದ ಅಂತರಂಗದ ವಸ್ತುಸ್ಥಿತಿಗಳ ಅರಿವು ಅವಶ್ಯವಾಗಿತ್ತು. ಅದಕ್ಕಾಗಿ ಇಲ್ಲಿನ ಜನರನ್ನ ಅರ್ಥಮಾಡಿಕೊಳ್ಳಲು, ಇಲ್ಲಿನ ಭಾಷೆ, ವ್ಯಾಕರಣ, ಸಾಹಿತ್ಯ, ಸಂಸ್ಕೃತಿ ಎಲ್ಲದರ ಕುರಿತು ಅಧ್ಯಯನಗಳು ಶುರುವಾದವು. ಶಾಸನ, ಕಾವ್ಯ, ಮೀಮಾಂಸೆ, ವ್ಯಾಕರಣಕ್ಕೆ ಸಂಬಂಧಿಸಿದ ಸಂಗ್ರಹಗಳು ಮತ್ತು ಸಂಪಾದನೆಗಳು ನಡೆದವು. ಸಮುದಾಯಗಳ ಅಧ್ಯಯನಗಳು ಹೆಚ್ಚು ಕಡಿಮೆ ಈ ವೇಳೆಗೆ ಪ್ರಾರಂಭವಾಗಿರಬೇಕು.

ಈ ಕಾಲ ಘಟ್ಟದ ಅಧ್ಯಯನ ಮಾದರಿಗಳು, ಮುಖ್ಯವಾಗಿ ಸಮುದಾಯಗಳ ಬಗ್ಗೆ 'ವಸ್ತು' ಅಥವಾ 'ಮೆಟೀರಿಯಲ್' ಎಂದೂ, 'ಕ್ಷೇತ್ರ' ಎಂದೂ ಪರಿಭಾವಿಸಿದವು. ಈ ನೆಲದ ಧಾರ್ಮಿಕ ಸ್ಥಿತಿಯಲ್ಲಿ ರೂಪುಗೊಂಡಿದ್ದ ಒಂದು ಸಮುದಾಯ ಮತ್ತು ಅದರ ಬಗೆಯ

ಜ್ಞಾನದ, ತಿಳುವಳಿಕೆಯ ಈ ಜಗತ್ತನ್ನ ಕಲೋನಿಯಲ್ ಅಧ್ಯಯನ ವಿಧಾನಗಳು 'ಮೆಟೀರಿಯಲ್, ಆಕರ, ಕ್ಷೇತ್ರ' ಎಂದು ಪರಿಗಣಿಸಿದವು. ಈ ಸಮುದಾಯಗಳ ವೈಭವ ಮುಗಿದು ಅವಕ್ಕೆ ಶೂನ್ಯ ಆವರಿಸಿದೆ. ಅವಕ್ಕೆ ತಮ್ಮ ಚರಿತ್ರೆಯನ್ನು ರೂಪಿಸಿಕೊಳ್ಳುವ ತಾಕತ್ತೂ ಇಲ್ಲ. ಅದಕ್ಕಾಗಿ ಅವುಗಳ ಚರಿತ್ರೆಯನ್ನು 'ನಾವುಗಳು' ಬರೆಯಬೇಕಿದೆ ಎಂಬ ಬೌದ್ಧಿಕ ಅಹಂಕಾರದಿಂದಲೇ ಈ ಅಧ್ಯಯನಗಳು ಪ್ರಾರಂಭವಾದವು. ಅದಕ್ಕಾಗಿ ಇಲ್ಲಿಯ ಸಮುದಾಯ ಗಳನ್ನ ಅನಾಗರಿಕ, ಅಪರಾಧಿ, ಅವೈಚಾರಿಕ, ಕ್ಷುದ್ರ ಗುಂಪುಗಳೆಂದೇ ಅಧ್ಯಯನಕಾರರು ಪರಿಗಣಿಸಿದರು. ವಸಾಹತುಶಾಹಿ ಕಾಲಘಟ್ಟದಲ್ಲಿ ಸಮುದಾಯಗಳ ಅಧ್ಯಯನದಲ್ಲಿ ತೊಡಗಿದ್ದ ಬ್ರಾಹ್ಮಣ ವಿದ್ವಾಂಸರು, ಒಂದು ಕೈ ಮೇಲು ಎನ್ನುವಂತೆಯೇ ಈ ಸಮುದಾಯಗಳನ್ನು ಕತ್ತಲ ಜಗತ್ತಿನ ಗುಂಪುಗಳೆಂದೇ ಕರೆದರು. ಈ ಹೊತ್ತಿನ ಅಧ್ಯಯನಗಳಿಗೆ ಪೊಲಿಟಿಕಲ್ ಆದ ಹಲವು ಬಗೆಯ ತುರ್ತುಗಳಿದ್ದವು. ಒಂದು ದೇಶದ ಬಹುಮುಖ್ಯ ವಾಗ್ವಾದಗಳು, ದರ್ಶನಗಳು ಅಲ್ಲಿಯ ಜಾನಪದ ಮತ್ತು ಕೆಳಜಾತಿ, ಆದಿವಾಸಿಗಳ ಜೀವನ ವಿಧಾನದಲ್ಲಿ ಅಡಕವಾಗಿರುತ್ತವೆ, ಜನರನ್ನ ತಿಳಿದುಕೊಳ್ಳುವುದಕ್ಕೆ, ದೇಶವನ್ನ ಆಳುವುದಕ್ಕೆ ಸಮುದಾಯಗಳನ್ನ ಅರ್ಥಮಾಡಿಕೊಳ್ಳಬೇಕೆನ್ನುವುದು ಇವುಗಳ ಹಿಂದಿನ ತರ್ಕವಾಗಿತ್ತು. ಹಲಗಲಿಯ ಬೇಡರನ್ನು ಕುರಿತ ಅಧ್ಯಯನದ ಹಿಂದೆ, ಅವರ ಆಯುಧಗಳನ್ನ ಕಿತ್ತುಕೊಂಡರೆ, ಅವರು ಹೇಗೆ ತಿರುಗಿ ಬೀಳಬಹುದು ಎಂದು ಅರ್ಥಮಾಡಿಕೊಳ್ಳಬೇಕಾದ ರಾಜಕೀಯ ಕಾರಣಗಳಿದ್ದವು. ಏಕೆಂದರೆ ೧೯ನೇ ಶತಮಾನದ ಆರಂಭದಿಂದ ವಸಾಹತುಶಾಹಿ ಆಡಳಿತಕ್ಕೆ ಮಾರಣಾಂತಿಕ ಹೊಡೆತಗಳನ್ನ ನೀಡಿದ್ದೇ ಇಲ್ಲಿನ ಕೆಳಜಾತಿಗಳು, ಆದಿವಾಸಿ ಜನಸಮುದಾಯಗಳು. ಹೀಗಾಗಿ ಈ ಕಾಲಘಟ್ಟದ ಅಧ್ಯಯನಗಳ ಹಿಂದೆ ಒಂದು ಬಗೆಯ ಕ್ರೂರ ಉಪಯೋಗವಾದಿ ದೃಷ್ಟಿಕೋನ ಅಡಗಿದೆ.

ಇನ್ನು ವಸಾಹತೋತ್ತರ ಕಾಲಘಟ್ಟದ ಸಮುದಾಯಗಳ ಅಧ್ಯಯನಗಳಲ್ಲಿ ಸಹ, ಮೇಲಿನ ದೃಷ್ಟಿಕೋನ ಯಥಾವತ್ತಾಗಿ ಹರಿದು ಬಂದಿರುವುದು ಕಾಣಬರುತ್ತದೆ. ಪಶ್ಚಿಮದ ರೋಮ್ಯಾಂಟಿಕ್ ಮತ್ತು ಹುಂಬ ರಾಷ್ಟ್ರೀಯತೆಯ ಅರೆಬರೆ ಪಾಕದಂತಿದ್ದ ಈ ಕಾಲಘಟ್ಟದ ಸಂವೇದನೆಗಳಿಗೆ ಕಲೋನಿಯಲ್ ದೃಷ್ಟಿಕೋನವನ್ನ ಸ್ಫೋಟಿಸಲಾಗಲಿಲ್ಲ. ಈ ಕಾಲಘಟ್ಟದ ಮೇಲ್ವರ್ಗಗಳ ಅಧ್ಯಯನಕಾರರ ಹಿತಾಸಕ್ತಿ, ವಸಾಹತುಶಾಹಿಗಳ ಹಿತಾಸಕ್ತಿಗಳಿಗಿಂತ ಭಿನ್ನವಾಗೇನು ಇರಲಿಲ್ಲ. ರಾಷ್ಟ್ರೀಯ ಹೋರಾಟದಲ್ಲಿ ಬ್ರಿಟಿಷರನ್ನ ಆಯಕಟ್ಟಿನ ಸ್ಥಳಗಳಲ್ಲಿ ಇರುಕಿಕೊಂಡು ಪಾಠಕಲಿಸಿದ್ದ, ತಮ್ಮ ಮುಖಾಮುಖಿ ಹೋರಾಟಗಳಲ್ಲಿ ಎಂದೂ ವಸಾಹತುಶಾಹಿಗಳಿಗೆ ಬೆನ್ನುಹಾಕದ ಆದಿವಾಸಿಗಳು, ಕೆಳಜಾತಿಗಳು, ಸ್ವಾತಂತ್ರ್ಯಾನಂತರ ನಡೆಸಿದ ಭೂಹೋರಾಟಗಳನ್ನು ಅಂದಿನ ಸರಕಾರ ಸೈನ್ಯ ನುಗ್ಗಿಸಿ ಹತ್ತಿಕ್ಕುತ್ತದೆ. ರಾಷ್ಟ್ರೀಯ ಹೋರಾಟದಲ್ಲಿ ಬ್ರಿಟಿಷರ ತುಪಾಕಿಗಳಿಗೆ ಎದೆಗೊಟ್ಟಿದ್ದ ಸಮುದಾಯಗಳು, ಸ್ವಾತಂತ್ರ್ಯಾನಂತರ ಸ್ಥಳೀಯ ಆಳುವ ವರ್ಗದ ದೃಷ್ಟಿಯಲ್ಲಿ ದೇಶದ್ರೋಹಿಗಳಾಗಿ ಪರಿಗಣಿತವಾಗುತ್ತವೆ. ಇದೇ ದೃಷ್ಟಿಕೋನ ಸಮುದಾಯಗಳ ಅಧ್ಯಯನಗಳಲ್ಲೂ ಢಾಳಾಗಿ ಕಾಣಿಸಿಕೊಳ್ಳುತ್ತದೆ. ರಾಷ್ಟ್ರೀಯ ಹೋರಾಟದ ಕರನಿರಾಕರಣೆ ಚಳುವಳಿಯಲ್ಲಿ ಭಾಗವಹಿಸಿ ಮನೆ, ಮಠ, ಜಮೀನುಗಳನ್ನು

ಕಳೆದುಕೊಂಡ ಪಾಲಿಕ್ಕಿಗಳು, ಮುಕ್ರಿಯರು ನಿರ್ಗತಿಕರಾಗಿ ಹೋದರು. ಸ್ವಾತಂತ್ರ್ಯಾನಂತರ ಇದೇ ಆದಿವಾಸಿಗಳು ಕಳೆದುಕೊಂಡ ತಮ್ಮ ಜಮೀನನ್ನು ಪಡೆಯಲು ಚಳುವಳಿ ನಡೆಸಿದಾಕ್ಷಣ ರಾಷ್ಟ್ರವಿರೋಧಿಗಳಾಗಿ ಹೋದರು. ಸ್ವಾತಂತ್ರ್ಯಾನಂತರ ಸಮುದಾಯಗಳನ್ನು ಅಧ್ಯಯನ ಮಾಡಿದ ಮಹಾನುಭಾವರು, ವಸಾಹತುಶಾಹೀ 'ಬಳಸಿಕೊಳ್ಳುವ' ದೃಷ್ಟಿಕೋನವನ್ನು ತಮ್ಮ ಮಿದುಳುಗಳಿಗೆ ಕಣ್ಣಿಗೆ ಕಾಣುವಂತೆ ಮೆತ್ತಿಕೊಂಡಿರುವುದು ಕಾಣಬರುತ್ತದೆ. ಇಂಡಿಯಾದ ನೈರುತ್ಯ ಭಾಗದ ದಂಡಕಾರಣ್ಯದ ಕೆಳಜಾತಿ, ಆದಿವಾಸಿಗಳ ಬಹುತೇಕ ಎಲ್ಲ ಭೂ ಹೋರಾಟಗಳನ್ನು ಈ ಅಧ್ಯಯನಗಳು ರಾಷ್ಟ್ರವಿರೋಧಿ 'ದಂಗೆಗಳೆಂದು' ಪರಿಗಣಿಸುತ್ತವೆ. ಹೀಗಾಗಿ ಸ್ವಾತಂತ್ರ್ಯಾನಂತರದ ಬಹುತೇಕ ಸಮುದಾಯಗಳ ಅಧ್ಯಯನಗಳು, ವಸಾಹತುಶಾಹಿ ವಿಕೃತ ದೃಷ್ಟಿಕೋನದ ಮುಂದುವರಿಕೆಗಳಂತೆ ಗೋಚರಿಸುತ್ತವೆ.

ಇನ್ನು ಇತ್ತೀಚಿನ ಸಬ್ಆಲ್ಟರ್ನ್ ಅಧ್ಯಯನಗಳ ಭಾಗವಾಗಿ ಕನ್ನಡದಲ್ಲಿ ಸಮುದಾಯಗಳ ಅಧ್ಯಯನಗಳು ಮೊದಲಿಗಿಂತ ಹೆಚ್ಚಾಗಿಯೇ ನಡೆಯುತ್ತಿವೆ. ಅಕಾಡೆಮಿಗಳು, ಸಂಸ್ಕೃತಿ ಇಲಾಖೆ, ವಿಶ್ವವಿದ್ಯಾಲಯದ ಸಮುದಾಯಗಳ ಅಧ್ಯಯನ ಕೇಂದ್ರಗಳು ಈಗ ಹೆಚ್ಚಾಗಿ ಸಮುದಾಯಗಳ ಅಧ್ಯಯನಗಳಲ್ಲಿ ತೊಡಗಿಕೊಂಡಿವೆ. ಈ ಅಧ್ಯಯನಗಳ ಎರಡು ಪ್ರಧಾನ ಲಕ್ಷಣಗಳನ್ನ ಹೀಗೆ ವಿಂಗಡಿಸಬಹುದು.

ಒಂದು: ಕೆಳಜಾತಿಗಳ, ಆದಿವಾಸಿಗಳ ಈ ಪರಂಪರೆ, ಸಂಸ್ಕೃತಿ ಈ ನೆಲದ ಫಲಗಳು, ಅವನ್ನ ರಕ್ಷಿಸಬೇಕು, ಕಾಪಾಡಬೇಕು. ಎರಡು: ಆಧುನಿಕ ಜಗತ್ತಿನ ನಮ್ಮ ಎಲ್ಲ ಬಗೆಯ ವಿರೋಧಿಗಳ ವಿರುದ್ಧ ಹೋರಾಡುವುದಕ್ಕೆ, ಈ ಪರಂಪರೆಗಳು ಹತ್ಯಾರಗಳನ್ನ ಒದಗಿಸುತ್ತವೆ. ಈ ಎರಡು ಆಶಯಗಳು ಇಂಡಿಯಾದ ಮಧ್ಯಮವರ್ಗದ ಬುದ್ಧಿಜೀವಿಗಳ ಬಿಕ್ಕಟ್ಟುಗಳಿಂದ ರೂಪಗೊಂಡಂತೆ ಕಾಣುತ್ತವೆ. ಇಲ್ಲಿ ಸಂಸ್ಕೃತಿಯನ್ನ 'ರಕ್ಷಿಸಬೇಕು, ಉಳಿಸಬೇಕು' ಎಂಬ ದೃಷ್ಟಿಕೋನ, ಸಂಸ್ಕೃತಿಯನ್ನ ಮೆಟೀರಿಯಲ್ ಎಂದು ಪರಿಗಣಿಸಿದ ಹಳಸಲು ವಿಧಾನದಿಂದ ಪ್ರೇರೇಪಿತವಾದದ್ದು. ಯುರೋಪಿನ ಅನೇಕ ದೇಶಗಳಲ್ಲಿ ಆಧುನಿಕತೆ ಉಂಟುಮಾಡಿದ ಬಿಕ್ಕಟ್ಟುಗಳಿಂದ ಉದ್ಭವಿಸಿದ ಈ 'ಉಳಿಸುವ' ಹಳಹಳಿಕೆಯನ್ನ ನಾವು ಯಥಾವತ್ತಾಗಿ ಅನುಕರಿಸುತ್ತಿದ್ದೇವೆ. ಆಧುನಿಕತೆ ಎಂಬುದು ಇಡಿಯಾಗಿ 'ನಮ್ಮ' ಸಂಸ್ಕೃತಿ ಪರಂಪರೆಗಳನ್ನ ನಾಶ ಮಾಡುತ್ತಿದೆ. ಅದಕ್ಕಾಗಿ ಅವುಗಳನ್ನ ರಕ್ಷಿಸಬೇಕು. ಈ ಆಧುನಿಕತೆಗೆ ಕೆಳಜಾತಿ ಮತ್ತು ಆದಿವಾಸಿಗಳ ಪ್ರತಿಕ್ರಿಯೆಗಳೇನು? ಇವು ನಿಜಕ್ಕೂ ಆಧುನಿಕತೆಯ ವಿರೋಧಿಗಳಾಗಿವೆಯೇ? ನಮ್ಮ ಈವತ್ತಿನ ಬಹುತೇಕ ಅಧ್ಯಯನಗಳಲ್ಲಿ ಈ ಪ್ರಶ್ನೆಗಳು ಗೈರು ಹಾಜರಾಗಿವೆ. ಕನ್ನಡವನ್ನ ದಲಿತರು, ಆದಿವಾಸಿಗಳು ಮಾತ್ರ ಉಳಿಸಬಲ್ಲರು ಎಂಬ ಥಿಯರಿಗಳ ಹಿಂದೆ ಯಾವ ರಾಜಕಾರಣ ಕೆಲಸ ಮಾಡುತ್ತಿದೆ? ಈ ರಾಜಕಾರಣದ ಬಿಕ್ಕಟ್ಟುಗಳೇನು? ಮಧ್ಯಮವರ್ಗದ ಬುದ್ಧಿಜೀವಿಗಳ ಅಸ್ತಿತ್ವದ ಬಿಕ್ಕಟ್ಟುಗಳ ಒಂದು ಭಾಗವಾಗಿ ಈ ಥಿಯರಿ ಕೆಲಸ ಮಾಡುತ್ತದೆ. ಆಧುನಿಕ ಜಗತ್ತಿನ ಎಲ್ಲ ಬಗೆಯ ಅತಂತ್ರಗಳಿಂದ ಜರ್ಝರಿತವಾದ ಈ ವರ್ಗದ ಬಿಕ್ಕಟ್ಟುಗಳೇ, ಕೆಳಜಾತಿ, ಆದಿವಾಸಿಗಳ ಜೀವನ ವಿಧಾನಗಳ ಕುರಿತು ಈ ವರ್ಗದಲ್ಲಿ ವಿಚಿತ್ರ

ಮೋಹಗಳನ್ನು ಹುಟ್ಟಿಸಿವೆ. ಆಧುನಿಕತೆಯ ಎಲ್ಲ ಸೌಲಭ್ಯಗಳನ್ನ ಅನುಭವಿಸುತ್ತಲೇ ಈ ವರ್ಗ ಆಧುನಿಕತೆಯನ್ನ ವಿರೋಧಿಸುತ್ತದೆ. ಆದರೆ ಕೆಳಜಾತಿಗಳು, ಆದಿವಾಸಿಗಳು ಬದಲಾವಣೆಯ, ಆಧುನಿಕತೆಯ ಪರವಾಗಿವೆ. ಕಾಲದ ಅನಿವಾರ್ಯತೆಯ ಫಲವಾಗಿ ವರ್ತಮಾನದಲ್ಲಿ ಏರ್ಪಡುವ ಎಲ್ಲ ಬಗೆಯ ಬದಲಾವಣೆಗಳನ್ನು, ಈ ಸಮುದಾಯಗಳು ಸಾವಧಾನವಾಗಿ ಗಮನಿಸುತ್ತಲೇ ಇರುತ್ತವೆ. ಬದಲಾಗುವ ಕಾಲಮಾನದ ಲಯಕ್ಕೆ ತಮ್ಮ ಸಂವೇದನೆಗಳನ್ನ ಹೊಂದಿಸಿಕೊಳ್ಳಲು ಹೆಣಗುತ್ತವೆ. ವರ್ತಮಾನದ ಈ ಎಲ್ಲ ಬದಲಾವಣೆ ಗಳನ್ನ ಈ ಸಮುದಾಯಗಳು ಸೋತು, ಕೈಚೆಲ್ಲಿ ಅಸಹಾಯಕತೆಯಿಂದ ಸ್ವೀಕರಿಸುತ್ತವೆ ಎಂದು ಹೇಳಿದರೆ ತಪ್ಪಾಗುತ್ತದೆ. 'ಸ್ವೀಕರಣ ಮತ್ತು ಪ್ರತಿರೋಧಗಳು' ಏಕ ಕಾಲದಲ್ಲಿ ಈ ಸಮುದಾಯ ಗಳ ಆತ್ಮದೊಳಗೆ ಸನ್ನದ್ಧವಾಗಿರುತ್ತವೆ. 'ಸ್ವೀಕರಿಸುವಾಗ' ಸಮುದಾಯದ ಆಳದಲ್ಲಿನ ಚಾರಿತ್ರಿಕ ಹಸಿವು, "ಪ್ರತಿರೋಧಿಸುವಾಗ" ಕಾಡುವ ಅನನ್ಯತೆಯ ಭಯ -ಇವೆರಡೂ ಒಂದು ಸಮುದಾಯದ ಸಂಸ್ಕೃತಿ ಕೋಶದ ಮಿಡಿತವನ್ನ ಅರ್ಥಪೂರ್ಣ ಲಯಕ್ಕೆ ಹೊಂದಿಸಿವೆ. ಹೀಗಾಗಿ ಆಧುನಿಕತೆಯ ವಿರೋಧ ಮಧ್ಯಮ ವರ್ಗದ ಬುದ್ಧಿಜೀವಿಗಳ ಬಿಕ್ಕಟ್ಟೇ ಹೊರತು ಸಮುದಾಯ ಗಳದ್ದಲ್ಲ.

ಇನ್ನು ಆಧುನಿಕ ಜಗತ್ತಿನ ಎಲ್ಲ ಆಕ್ರಮಣಗಳಿಗೆ ನಮ್ಮ ಸಮುದಾಯಗಳ ಪರಂಪರೆ ಯೊಳಗೆ ಹತ್ಯಾರಗಳು ರೂಪಗೊಳ್ಳುತ್ತಿವೆ ಎಂಬ ನಂಬಿಕೆ ನಮ್ಮ ಅಧ್ಯಯನಗಳ ಹಿಂದೆ ಕೆಲಸ ಮಾಡುತ್ತಿದೆ. 'ಹೀಗಾಗಿ ಕೆಳಜಾತಿಗಳ, ಆದಿವಾಸಿಗಳ ಸಾಂಸ್ಕೃತಿಕ ಜಗತ್ತು ಸಂಪದ್ಭರಿತ ವಾದದ್ದು, ಅದೊಂದು ಸಂತೃಪ್ತಲೋಕ, ಸಂಘರ್ಷಗಳೇ ಇಲ್ಲದ ನಿರುಮ್ಮಳ ಜಗತ್ತು' ಎಂದು ಪರಿಗಣಿತವಾಗಿದೆ. 'ಉಪಸಂಸ್ಕೃತಿ ಮಾಲೆ'ಯ ಮತ್ತು ಇತ್ತೀಚಿನ ಬಹುಪಾಲು ಅಧ್ಯಯನಗಳು ಇದೇ ಮಾದರಿಯವು. ಈ ಎಲ್ಲಾ ಅಧ್ಯಯನಕಾರರು ಭಾರೀ ಶ್ರದ್ಧೆಯಿಂದ ಸಮುದಾಯಗಳನ್ನ ಅಧ್ಯಯನ ಮಾಡಿದ್ದಾರೆ ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ ಹೆಚ್ಚಿನವರು ಸಂಸ್ಕೃತಿಯನ್ನ ಆಯಾ ಸಮುದಾಯದ ಸಾಮಾಜಿಕ, ಆರ್ಥಿಕ ನೆಲೆಗಳಿಂದ ನೋಡುವ ಪ್ರಯತ್ನ ಮಾಡಿದಂತಿಲ್ಲ. ಒಂದು ಸಮುದಾಯದ ಆಚರಣೆ, ಆಲೋಚನಾ ವಿಧಾನಗಳು ಆಯಾ ಸಮುದಾಯದ ಸಾಮಾಜಿಕ - ಆರ್ಥಿಕ ನೆಲೆಗಳ ಜೊತೆ ನೇರ ಸಂಬಂಧ ಇದೆ ಎಂಬುದು ಬಹುತೇಕ ಎಲ್ಲ ಅಧ್ಯಯನಗಳಲ್ಲಿ ಗೌಣ ಸಂಗತಿಯಾಗಿದೆ. ಬದಲಾಗುತ್ತಿರುವ ಜಗತ್ತಿನ ಜೊತೆ, ಬದಲಾಗುತ್ತಿರುವ ಸಮುದಾಯಗಳ ಸಾಂಸ್ಕೃತಿಕ ಬದುಕನ್ನ ಗಮನಿಸದೆ ಆಧುನಿಕ ಅಕ್ರಮಣಗಳನ್ನ ತಡೆಯಲು, ಈ ಸಮುದಾಯಗಳ ಪರಂಪರೆಯೊಳಗೆ ಹತ್ಯಾರಗಳಿವೆ ಎಂದು ಭ್ರಮಿಸುವುದೇ ಒಂದು ವ್ಯಂಗ್ಯ. ಮಧ್ಯಮ ವರ್ಗದ ಬುದ್ಧಿಜೀವಿಗಳ ಅತಂತ್ರ ಜಗತ್ತಿನ ಬಿಕ್ಕಟ್ಟುಗಳು ಈ ಥಿಯರಿಗಳ ಹಿಂದೆ ಕೆಲಸ ಮಾಡುತ್ತಿವೆ. ಆಧುನಿಕ ಆಕ್ರಮಣಗಳನ್ನ ಪ್ರತಿರೋಧಿಸಲು ಈ ವರ್ಗ ಮತ್ತೆ ತನ್ನ 'ಮಾಜಿ' ನೆಲೆಗಳ ಕಡೆಗೆ ಮುಖಮಾಡಿ ನಿಂತಿದೆ.

ಇತ್ತೀಚಿನ ಸಮುದಾಯಗಳ ಅಧ್ಯಯನಗಳಲ್ಲೆಲ್ಲ ಈ ನವಸಂಪ್ರದಾಯವಾದೀ ನಿಲುವುಗಳು ಪದೇ ಪದೇ ವ್ಯಕ್ತವಾಗುತ್ತಿರುವುದನ್ನ ನಾವು ಕಾಣಬಹುದು. ಇದು ಯೂರೋಪಿನ ಸಾಂಸ್ಕೃತಿಕ

ಮಾನವಶಾಸ್ತ್ರದ ಕುರುಡು ಅನುಕರಣೆಯುಂತೆಯೂ ಕಾಣುತ್ತದೆ. ಇಂಡಿಯಾದ ಕೆಳಜಾತಿ ಮತ್ತು ಆದಿವಾಸಿ ಜನಸಮುದಾಯಗಳಿಗೆ ಒಂದು ಬಗೆಯ 'ಸಂಕರ ಪ್ರವೃತ್ತಿ' ಮೈಗೂಡಿದೆ. ಆಧುನಿಕ ಜಗತ್ತಿನ ಎಲ್ಲ ಬಗೆಯ ಪ್ರಭಾವಗಳಿಗೆ ಮುಖಾಮುಖಿಯಾಗುವ ಧಾರಣಾಶಕ್ತಿ ಸಮುದಾಯಗಳ ಈವತ್ತಿನ ಹಲವು ತುರ್ತುಗಳಲ್ಲೊಂದಾಗಿದೆ. ಸಬಾಲ್ಟರ್ನ್ ಅಧ್ಯಯನಗಳು. ನಮ್ಮ ಸಮುದಾಯಗಳ ಸಾಂಸ್ಕೃತಿಕ ಜಗತ್ತನ್ನು, ಅವುಗಳ ಸಾಮಾಜಿಕ ಆರ್ಥಿಕ ಬದುಕಿನ ಒಂದು ಭಾಗ ಎಂದು ಪರಿಗಣಿಸಬೇಕಿದೆ. ಅಧ್ಯಯನಕಾರ ತಾನು ಅಧ್ಯಯಿಸುವ ಸಮುದಾಯದ 'ವಿಷಾದಗಳ' ಜಗತ್ತಿನ ಒಂದು ಭಾಗವಾಗಿ ಅಧ್ಯಯನ ಮಾಡಬೇಕಿದೆ. ನಮ್ಮ ಅಧ್ಯಯನಗಳು ಸಮುದಾಯಗಳಿಗೆ 'ಜೀವಂತಿಕೆಯ' ಪಾಠ ಕಲಿಸಬೇಕಿಲ್ಲ. ವರ್ತಮಾನದ ಬದುಕಿನಲ್ಲಿ ವಿಷಮ ಆರ್ಥಿಕ ವ್ಯವಸ್ಥೆಯೊಳಗೆ ನಲುಗುತ್ತಿರುವ ಸಮುದಾಯಗಳಿಗೆ, ಈ ಅಧ್ಯಯನಗಳು ಭರವಸೆಗಳನ್ನು ಹುಟ್ಟಿಸಿದರೆ ಸಾಕು. 'ಜೀವಂತಿಕೆಯ, ಉಳಿದುಕೊಳ್ಳುವ' ಬಿಕ್ಕಟ್ಟುಗಳಿಗೆ ಆಯಾ ಸಮುದಾಯಗಳೇ ಮುಖಾಮುಖಿಯಾಗುತ್ತವೆ.

### ಅ. ಕನ್ನಡ

೧. ಅಕ್ಕಮಹಾದೇವಿ(ಅನು) ೧೯೮೪. ಬುಡಕಟ್ಟು ನ್ಯಾಯ. ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨. ಡಾ. ಅಭಯ ಕೌಕ್ರಾಡಿ ೧೯೯೭, ಮೊಗೇರರು ಜನಾಂಗ ಜಾನಪದ ಅಧ್ಯಯನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ.

೩. ಡಾ. ಅಂಬಳಿಕೆ ಹಿರಿಯಣ್ಣ, ೧೯೯೩, ಕಚ್ಚೆ ಗೌಳಿಗರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪. ಕಮಲಾಕ್ಷ. ಪಿ., ೧೯೯೪, ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ. ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೫. ಡಾ. ಕರಿಶೆಟ್ಟಿ ರುದ್ರಪ್ಪ, ೧೯೯೫. ಮ್ಯಾಸ ನಾಯಕರು ಒಂದು ಜನಾಂಗಿಕ ಅಧ್ಯಯನ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬. ಕ್ಯಾತನಹಳ್ಳಿ ರಾಮಣ್ಣ, ೧೯೯೨. ಗೊಂದಲಿಗರು ಒಂದು ಅಧ್ಯಯನ. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. .

೭. ಡಾ. ಕೃಷ್ಣಮೂರ್ತಿ ಹನೂರು, ೧೯೯೩, ಮ್ಯಾಸಬೇಡರ ಸಂಸ್ಕೃತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮. ಕೃಷ್ಣಯ್ಯ. ಎ.ಬಿ., ೧೯೭೯, ಛಲವಾದಿ ಜನಾಂಗ. ಹೇಮಂತ ಪ್ರಕಾಶನ, ಮೈಸೂರು.

೯. ಕೇಶವನ್ ಪ್ರಸಾದ್, ೧೯೯೬. ಕಪ್ಪ ಹೊಲೆಯರ ಸಂಸ್ಕೃತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೦. ಕೇಶವನ್ ಪ್ರಸಾದ್, ೧೯೯೭. (ಸಂಪಾದನೆ) ಮಲೆಮಾದೇಶ್ವರ. ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

೧೧. ಕೋಟಗಾನಹಳ್ಳಿ ರಾಮಯ್ಯ. ೧೯೯೩, ಸಿಂಧ್ ಮಾದಿಗರ ಸಂಸ್ಕೃತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೨. ಡಾ. ಪಿ.ಕೆ. ಖಂಡೋಬ. ೧೯೯೩, ಸುಡುಗಾಡು ಸಿದ್ಧರ ಸಂಸ್ಕೃತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೩. ಡಾ. ಟಿ. ಗೋವಿಂದರಾಜು, ೧೯೯೩, ಗೊಂಬೆ ರಾಮರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೪. ಗೀತಾ ನಾಗಭೂಷಣ, ೧೯೯೩, ದುರಗ ಮುರಗಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೫. ಗಂಗಾಧರ ದೈವಜ್ಞ(ಸಂ.). ೧೯೯೯, ಮಾಳಿಂಗರಾಯನ ಕಾವ್ಯ, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.

೧೬. ಡಾ. ಚಕ್ಕರೆ ಶಿವಶಂಕರ್, ೧೯೯೩, ಗೊರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೭. ಚಲುವರಾಜು, ೧೯೯೩, ದಕ್ಕಲರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೮. ಚಲುವರಾಜು (ಸಂ). ೧೯೯೭, ಜುಂಜಪ್ಪ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

೧೯. ಎನ್.ಚಂದ್ರಪ್ಪ, ೧೯೯೩, ಮೊಂಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೦. ಡಾ॥ ಚಂದ್ರು ಕಾಳೇನಹಳ್ಳಿ, ೧೯೯೩, ಸೋಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೧. ಜ್ಯೋತಿ ಹೊಸೂರು, ೧೯೮೫, ಜಾತಿಗಾರರ ಜಾತಕ, ಜಾನಪದ ಮಂಟಪ, ಕಾಲಗತಿ ಪ್ರಕಾಶನ, ರಾಯಭಾಗ

೨೨. ದಾದಾಪೀರ್ ಬಿ.ಸಿ., ೧೯೯೩, ಪಿಂಜಾರರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು.

೨೩. ದೇವನೂರು ಪಾಂಡುರಂಗ, ೧೯೯೩, ಭೈರರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೪. ಡಾ. ದೇವೇಂದ್ರ ಕುಮಾರ ಹಕಾರಿ, ೧೯೯೩, ಡೊಂಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೫. ನಾಗರಾಜ ಎಂ. ಜಿ. ಕೆಂಬಟ್ಟಿ, ೧೯೯೩, ಹೊಲೆಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೬. ನಾಗರಾಜ. ಬಿ.ಪಿ. ಗೊಲ್ಲರ ಹಟ್ಟಿ, ೧೯೯೮, ಒಂದು ಸಾಮಾಜಿಕ ಅಧ್ಯಯನ, ಆಪ್ತ ಪ್ರಕಾಶನ, ಕೈಗಾರಿಕಾ ನಗರ, ಬೆಂಗಳೂರು.

೨೭. ಪಿ.ಗಾ. ನಾಯಕ, ೧೯೯೩, ಹರಿಕಾಂತರ ಸಂಸ್ಕೃತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೮. ಡಾ. ಪಿ.ಬಿ. ನಾಯಕ, ೧೯೯೩, ಲಂಬಾಣಿ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೯. ಡಾ. ಎನ್.ಆರ್. ನಾಯಕ, ೧೯೯೩. ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೦. ಡಾ. ಟಿ. ನಾರಾಯಣ, ೧೯೯೩, ಯಾನಾದಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೧. ನಾರಾಯಣ ಯಾಜಿ, ೧೯೭೯, ಶರಾಲಿಯ ಗೊಂಡರು, ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ.

೩೨. ಎ.ವಿ. ನಾವಡ(ಸಂ). ೧೯೯೮, ಸಿಪಾಯ್ಲನ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

೩೩. ಸಿಂಗಣ್ಣ ಸಣ್ಣಕ್ಕಿ, ೧೯೯೩, ಗೊಂದಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೪. ಡಾ. ಪುರುಷೋತ್ತಮ ಬಿಳಿಮಲೆ, ೧೯೯೩, ಕೊರಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೫. ಪ್ರಭಾಕರ. ಎ.ಎಸ್.(ಸಂ). ೧೯೯೯, ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

೩೬. ಪ್ರಹ್ಲಾದ ಬೆಟಗೇರಿ, ೧೯೯೩, ಅಡವಿ ಚಂಚರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೭. ಹಿ.ಚಿ. ಬೋರಲಿಂಗಯ್ಯ, ೧೯೯೧, ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು.

೩೮. ಹಿ.ಚಿ. ಬೋರಲಿಂಗಯ್ಯ, ೧೯೯೩, ಸಿದ್ದಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೯. ಹಿ.ಚಿ. ಬೋರಲಿಂಗಯ್ಯ, ೧೯೯೪, ಕಾಡು ಕಾಂಕ್ರೀಟ್ ಮತ್ತು ಜಾನಪದ, ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ.

೪೦. ಹಿ.ಚಿ. ಬೋರಲಿಂಗಯ್ಯ (ಸಂ). ೧೯೯೭, ಮಂಟೇಸ್ವಾಮಿ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

೪೧. ಹಿ.ಚಿ. ಬೋರಲಿಂಗಯ್ಯ (ಸಂ). ೧೯೯೯, ಗೊಂಡರ ರಾಮಾಯಣ, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.

೪೨. ಡಾ. ಜಿ.ಎಸ್. ಭಟ್ಟ, ೧೯೯೩, ಹಸಲರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೩. ಮಾನಸ, ೧೯೯೩, ಕೊರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೪. ಡಾ. ಕೆ.ಎಂ. ಮೈತ್ರಿ (ಸಂ), ೧೯೯೭, ಕುಮಾರರಾಮ ಮತ್ತು ಕೃಷ್ಣಗೊಲ್ಲರ ಕಾವ್ಯ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

೪೫. ಮೋಹನ್ ಜಿ.ಎನ್., ೧೯೯೦, ಗೆಜ್ಜೆ ಮಾತಾಡುತಾವೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೪೬. ರಾಜಪ್ಪ ದಳವಾಯಿ, ೧೯೯೩, ಹಕ್ಕಿಪಿಕ್ಕಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೭. ರಾಮಕೃಷ್ಣ ಗುಂಡಿ, ೧೯೯೩, ಅಗೇರರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳರು.

೪೮. ಡಾ. ಡಿ.ಬಿ. ರಾಮಚಂದ್ರಾಚಾರ್, ೧೯೯೩, ಕುಡಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೯. ಹೆಚ್.ಜೆ. ಲಕ್ಕಪ್ಪಗೌಡ (ಸಂ), ೧೯೯೮, ಕರ್ನಾಟಕ ಬುಡಕಟ್ಟುಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೫೦. ಎ.ಸಿ. ಲಲಿತ, ೧೯೯೩, ಕಾಡು ಕುರುಬರು ಮತ್ತು ಜೇನುಕುರುಬರು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೫೧. ಲಕ್ಷ್ಮೀಪತಿ ಕೋಲಾರ, ೧೯೯೩, ಮಾಸ್ತಿಕರ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೫೨. ವಿಷ್ಣು ನಾಯ್ಕ, ೧೯೮೨, ಹದ್ದುಪಾರಿನ ಹಿಂದೆ ಮುಂದೆ, ಶ್ರೀ ರಾಘವೇಂದ್ರ ಪ್ರಕಾಶನ, ಬೆಂಗಳೂರು.

೫೩. ವೆಂಕಟರಾಜ ಪೂಣಿಂಚತ್ತಾಯ, ೧೯೯೩, ಮೊಗವೀರರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೪. ಶಿವಾನಂದ ಗುಬ್ಬಣ್ಣನವರ, ೧೯೯೩, ಕರ್ನಾಟಕದ ಕುರುಬರು, ಅಕ್ಷರ ಪ್ರಕಾಶನ ಧಾರವಾಡ.

೫೫. ತೀ.ನಂ. ಶಂಕರನಾರಾಯಣ, ೧೯೮೨, ಕಾಡು ಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪ್ರಸಾರಾಂಗ, ಮೈಸೂರು ವಿ.ವಿ.

೫೬. ಶಂಕರ ನಾರಾಯಣರಾವ್ ಎನ್.ಪಿ., ೧೯೯೪, ಫಣಿಯರವರ ಸಮಾಜ ಮತ್ತು ಜಾನಪದ ಇತಿಹಾಸ, ಅಕ್ಷರ ಪ್ರಕಾಶನ ಹಗ್ಗೋಡು, ಸಾಗರ.

೫೭. ಸಿದ್ಧಗಂಗಯ್ಯ ಕಂಬಾಳು, ೧೯೯೩, ಇಲ್ಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೮. ಸೈಯದ್ ಜಮೀರುಲ್ಲಾ ಷರೀಫ್, ೧೯೯೫, ಗೊಂಡರ ಸಂಸ್ಕತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೯. ಡಾ. ಸೋಮಶೇಖರ್ ಇಮ್ರಾಪುರ (ಸಂ). ೧೯೯೩. ಜಾನಪದ ಸಾಹಿತ್ಯ ದರ್ಶನ ಭಾಗ-೧೭, (ಜಾನಾಂಗಿಕ ಅಧ್ಯಯನ). ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ., ಧಾರವಾಡ.

೬೦. ಡಾ. ಹರಿಲಾಲ್ ಪವಾರ್, ೧೯೯೩, ಹೇವರ ಸಂಸ್ಕೃತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು.

೬೧. ಡಾ. ಟಿ.ಎಸ್. ಹರೀಶ್, ೧೯೯೩, ಎರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೨. ಎಸ್. ಎಸ್. ಹಿರೇಮಠ, ೧೯೯೭, ಉಪ್ಪಾರರು, ಹರಪನಹಳ್ಳಿ ತಾಲೂಕು ಉಪ್ಪಾರರ ನೌಕರ ಸಂಘ.

೬೩. ಹೊಸೂರು ಮುನಿಶಾಮಪ್ಪ, ೧೯೯೩, ನಟುವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

## English-Books

೧. Bahadur. K.P., 1978. Koravas In: caste. Tribe. and culture of India, S.S. Publications, New Delhi.

೨. Basak. D.N., 1974. Tribal Demography of Karnatataka State. The anthropological Survey of India

೩. Basak. D.N., 1980, Scheduled Tribes of Karnataka State-Vol.29, The Department of Anthropology

೪. Edgor Thurston. 1906. Enthographic notes in Southern India. Government Press. Madras.

೫. Edgar Thurston. K. rangachar. 1909. Castes and Tribes Southern India. (Seven volume) Asian Educational Services. New Delhi.

೬. Edwin Jayadas. 1995. Tribals in Our Global Village. Pan Media. Bangalore

೭. G.S. Ghurye. 1990. Caste and Race in India. Popular Prakashana. Bombay

೮. Hasan Syed Siraj. 1920. Caste and Tribes of E.H. The Nizam's Dopminions. Asian Education Services. Madras

೯. Hawanur L.G., 1975. Karnataka Backward Classess Commission Report. Government of Karnataka. Bangalore

೧೦. Hayavadana Rao C. (Ed). 1929. Mysore Gazetter. B R Publishers Corporation, New Delhi

೧೧. Iyer. L.K.A., H.V. Nanjundayya.1935, The Mysore Tribes and Castes. The Mysore University, Mysore.
೧೨. Krishna moorthy Hanoor(Ed), 1991, Encyclopaedia of the Folk Culture of Karnataka. Institute of Asian Studies Madras
೧೩. Luiz .A.A.D., 1963, Tribes of Mysore, Viswa and company.
೧೪. Mann.R.S., Hakki Pikki, 1980, Trapper and Sellar, Anthropological Survey of India, Calcutta.
೧೫. Morab S.G., 1977, Killekyatha Nomadic Folk Artists of Northern Mysore, Anthropological Survey of India, Culcatta.
೧೬. Morab S.G., 1979, Tribal Education in Karnataka, Anthropological Survey of India, Mysore
೧೭. Morab S.G., 1977, The Soliga of Biligiri Rangana Hills, Anthropological Survey of India,Culcatta
೧೮. Nirmal Kumar Bose, 1971, Tribal life In India, National Book Trust, India New Delhi.
೧೯. Palakshappa. T.C., 1976, Siddis of North Kanara, Sterling Publishers, New Delhi.
೨೦. Shashi S.S., Padmashri, 1994, Encyclopaedia of Indian Tribes Vol-12, Anmol Publications Pvt. Ltd., New Delhi.
೨೧. Singh. K.S., 1998, The People of India, Vol-III, Oxford University Press-1
೨೨. Singh . K.S., 1998, People of India, Vol-XXVI, Seagull Books, Calcutta.
೨೩. Sontheimer G.D., 1993, Pastoral Deities in Western India, Oxford University Press, New Delhi
೨೪. Upadhyaya H.C., 1991, Reservation for SC/ST's in India, Anmol Publication, New Delhi.

**ಲೇಖನ ಸೂಚಿ**

೧. ಅರವಿಂದ ಮಾಲಗತ್ತಿ ' ಉತ್ತರ ಕರ್ನಾಟಕ ಅಲೆಮಾರಿ ಜನಾಂಗ-ಡಕ್ಕಲಿಗರು' ಜಾನಪದ ವ್ಯಾಸಂಗ-೧೯೮೫. ಶೈಲ ಪ್ರಕಾಶನ, ಅಂಬೇಡ್ಕರ ರಸ್ತೆ, ಮುದ್ದೇಬಿಹಾಳ್
೨. ಅರುಣ ಕುಮಾರ್ 'ಕೊರಗ ಜನಾಂಗದ ಜೀವನ ಸಂಬಂಧೀ ಸಂಸ್ಕಾರಗಳು' 'ಸೀಮೆ'-೧೯೯೫, ಜಾನಪದ ಸಂಘ, ವಿಜಯ ಕಾಲೇಜ್, ಮುಲ್ಕಿ (ದ.ಕ)
೩. ಡಾ. ಅಂಬಳಿಕೆ ಹಿರಿಯಣ್ಣ, 'ಬುಡಕಟ್ಟು ಜನರ ಬದಲಾಗುತ್ತಿರುವ ಆರ್ಥಿಕ ಜೀವನ'.

ಜಾನಪದ: ಕೆಲವು ಅಧ್ಯಯನಗಳು-೧೯೯೯. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೪. ಡಾ. ಅಂಬಳಿಕೆ ಹಿರಿಯಣ್ಣ 'ತೊದವರ ಮರಣ ಸಂಪ್ರದಾಯಗಳು' ಜಾನಪದ ವೀಕ್ಷಣೆ-೧೯೮೭. ಪ್ರಜ್ವಲ ಪ್ರಕಾಶನ, ಮೈಸೂರು.

೫. ಕಾಳೇಗೌಡ ನಾಗವಾರ 'ಕಾಡುಗೊಲ್ಲರ ಜನಪದ ಕಾವ್ಯ' ಜುಂಜಪ್ಪನ ಹಾಡು. 'ಜಾನಪದ ಸಾಹಿತ್ಯ ದರ್ಶನ-ಭಾಗ.೬-೧೯೭೮, ಪ್ರಸಾರಾಂಗ, ಕರ್ನಾಟಕ ವಿ.ವಿ., ಧಾರವಾಡ.

೬. ಕೃಷ್ಣ ಐಯಂಗಾರ್ ಬಿ., ಕನ್ನಡ ನಾಡಿನ ಆದಿವಾಸಿಗಳು, ೧೯೫೧, ಮೈಸೂರು ರಾಜ್ಯ, ವಾರ್ತಾ ಇಲಾಖೆ, ಮೈಸೂರು.

೭. ಕೃಷ್ಣಮೂರ್ತಿ ಹನೂರು. 'ಚಿತ್ರದುರ್ಗದ ಮೂರು ಬುಡಕಟ್ಟುಗಳು' ಮಲೆನಾಡಿನ ಜಾನಪದ-೧೯೮೩. ಸ್ನಾತಕೋತ್ತರ ಕೇಂದ್ರ ಬಿ.ಆರ್. ಪ್ರಾಜೆಕ್ಟ್, ಶಿವಮೊಗ್ಗ.

೮. ಡಾ. ಪಿ.ಕೆ. ಖಂಡೋಬ 'ಬುಡಕಟ್ಟುಗಳ ಸಾಂಸ್ಕೃತಿಕ ಅಧ್ಯಯನ ಸೂತ್ರಗಳು ವಿವೇಚನೆ' ಜಾನಪದ ಮುನ್ನೋಟ-೧೯೯೩. ಸಂಗೀತ ಪಬ್ಲಿಕೇಷನ್ಸ್ ಗುಲ್ಬರ್ಗ

೯. ನಾಯಕ್ ಎಸ್. ಬಿ., 'ಉತ್ತರ ಕನ್ನಡ ಜಿಲ್ಲೆಯ ನಾಡವರು' ಜಾನಪದ ಗಂಗೋತ್ರಿ-ಮಾರ್ಚ್-೯೬. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು.

೧೦. ನಾವಡ. ಎ.ವಿ. ಕುಡುಬಿಯರು; ಹೊಸತು-ಹಳತರ ಸಂಘರ್ಷದಲ್ಲಿ ಕೊರಗರು: ದಕ್ಷಿಣ ಕನ್ನಡ ಬುಡಕಟ್ಟು ಜನಾಂಗ' ಜಾನಪದ ಸಮಾಲೋಚನ-೧೯೯೩, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೧. ನಾವಡ. ಎ.ವಿ. 'ಕರಾವಳಿ ಕರ್ನಾಟಕದ ಗೋವಿ ಕುಡುಬಿಯರು' ಜಾನಪದ-೧೯೯೩. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೨. ನಾವಡ.ಎ.ವಿ., ಬುಡಕಟ್ಟು ಅಭಿವೃದ್ಧಿ: ಒಂದು ಪರಿಕಲ್ಪನೆ 'ಒಂದು ಸೊಲ್ಲು ನೂರು ಸೊರ'-೧೯೯೯, ಕರ್ನಾಟಕ ಸಂಘ, ಪುತ್ತೂರು (ದ.ಕ.)

೧೩. ಪುರುಷೋತ್ತಮ ಬಿಳಿಮಲೆ. 'ಜೋಗಿಗಳು'ಜಾಗ್ರತಗೊಳ್ಳದ ಜನಾಂಗ, ಕರಾವಳಿ ಜಾನಪದ-೧೯೯೦, ಮಂಗಳ ಗಂಗೋತ್ರಿ-ದ.ಕ.

೧೪. ಮೀರಸಾಬಿಹಳ್ಳಿ ಶಿವಣ್ಣ 'ಗಣೆಯವರು' ಜಾನಪದ ಗಂಗೋತ್ರಿ-ಜೂನ್ ೯೨. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೫. ರಂಗಾರೆಡ್ಡಿ ಕೋಡಿರಾಂಪುರ 'ಪಟುವರು' ಬಂಡಾಯ ಜಾನಪದ-೧೯೯೫. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೬. ಲಲಿತ. ಎ.ಸಿ. 'ಕರ್ನಾಟಕದಲ್ಲಿ ಬುಡಕಟ್ಟು ಅಧ್ಯಯನ' ಜಾನಪದ ಗಂಗೋತ್ರಿ-ಜೂನ್ -೯೩ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೭. ವೆಂಕಟರಾಜ ಪುಣಿಂಚತ್ತಾಯ 'ಮೊಗವೀರರು ಮತ್ತು ಸಮುದ್ರ ಜಾನಪದ' ತುಳು ನಡೆ ನುಡಿ-೧೯೯೮. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

೧೮. ಶಂಕರನಾರಾಯಣ. ತೀ.ನಂ. 'ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ' ಜಾನಪದ ಗಂಗೋತ್ರಿ-೧೯೯೮ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.
೧೯. ಶಂಕರ ನಾರಾಯಣರಾವ್. ಎಸ್.ಪಿ. ಎರವರ ಕುಮೇರು ಕೃಷಿ', ಕನ್ನಡ ಅಧ್ಯಯನ (ಗಾಳಿ ಸಂಚಿಕೆ), ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.
೨೦. ಸೈಯ್ಯದ್ ಜಮೀರುಲ್ಲಾ ಷರೀಫ್, 'ಗೊಂಡರ ಕೋಗ್ತಿ ಜಾತ್ರೆ' ಜಾನಪದ ಗಂಗೋತ್ರಿ-೯೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.
೨೧. ಹುಚ್ಚಪ್ಪ ಮಾಸ್ತರ್. ಎನ್.'ಗೊಂಡರು' ಜಾನಪದ ಗಂಗೋತ್ರಿ ಮಾರ್ಚ್-೯೪ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

●

# ಈ ಸಂಚಿಕೆಯ ಲೇಖಕರು

೧. ಡಾ. ಹಿ.ಚಿ. ರಾಮಚಂದ್ರೇಗೌಡ, ಪ್ರಾಧ್ಯಾಪಕರು, ಜಾನಪದ ವಿಭಾಗ, ಕುವೆಂಪು ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು-೫೭೦೦೦೬

೨. ಡಾ. ಜಿ.ಎನ್. ಉಪಾಧ್ಯ, Lecturer. Dept. of kannada University of Mumbai, MUMBA-400098

೩. ಡಾ. ವೀರಣ್ಣ ದಂಡೆ, ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೪. ಡಾ. ಮೋಹನ ಕುಂಟಾರ್, ರೀಡರ್, ಭಾಷಾಂತರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಡಾ. ಕೇಶವನ್ ಪ್ರಸಾದ್, ರೀಡರ್, ಭಾಷಾಂತರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ದಿವಂಗತ ಶ್ರೀ ಎಂ. ಶಿಂಗ್ರಯ್ಯನವರು

೭. ಪ್ರೊ. ಆರ್.ಎನ್. ನಂದಿ, Proffessor (Rtd) Dept. Of History, University of Patna, PATNA(BIHAR)

೮. ವಿಜಯಕುಮಾರ ಎಂ. ಬೋರಟ್ಟಿ, Research Scholar, Center For Comparative Literature, University Of Hyderabad, HYDERABA-500046

೯. ಡಾ.ಎಸ್.ಎಸ್. ಅಂಗಡಿ, ಅಧ್ಯಾಪಕರು, ಭಾಷಾಂತರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಬಾಲಸುಬ್ರಹ್ಮಣ್ಯ ಕಂಜರ್ಪಣೆ, ಸಿರಿ, ಬ್ರಾಹ್ಮಿನ್ ವ್ಯಾಲಿ, ಮಡಿಕೇರಿ-೫೭೧೨೦೧

೧೧. ಡಾ. ಎಂ.ಜಿ.ಬಿರಾದಾರ, 'ಚಿತ್ರಲಾ' ಗುಬ್ಬಿ ಕಾಲನಿ, ಸೇಡಂ ರಸ್ತೆ, ಗುಲಬರ್ಗಾ.

೧೨. ಡಾ. ಮಾಧವ ಪೆರಾಜೆ, ಅಧ್ಯಾಪಕರು, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. ಕಡಿದಾಳು ಶಾಮಣ್ಣ, ರೈತ ಮುಖಂಡರು, ಮೈದೊಳಲು, ಭಗವತಿಕೆರೆ, ಭದ್ರಾವತಿ ತಾಲೂಕು.

೧೪. ಎಸ್.ಪ್ರಭಾಕರ್, ಅಧ್ಯಾಪಕರು, ಜಾನಪದ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕನ್ನಡ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯವು, ತಾನೊಂದು ಸಂಶೋಧನ ಸಂಸ್ಥೆಯಾಗಿ ಪ್ರಕಟಿಸುತ್ತಿರುವ ಹಲವು ನಿಯತಕಾಲಿಕೆಗಳಲ್ಲಿ, 'ಕನ್ನಡ ಅಧ್ಯಯನ'ವು ಒಂದು ವಿದ್ವತ್ ಪತ್ರಿಕೆಯಾಗಿದೆ. ಇದು ಕರ್ನಾಟಕದ ಅಧ್ಯಯನಗಳಿಗೆ ಮೀಸಲಾದ ಪತ್ರಿಕೆ. ಕರ್ನಾಟಕದ ಜನ, ಸಮಾಜ, ಭಾಷೆ, ಸಾಹಿತ್ಯ, ಸಂಸ್ಕೃತಿ, ಚರಿತ್ರೆ, ಧರ್ಮ, ಆರ್ಥಿಕತೆ, ರಾಜಕಾರಣ, ಪರಿಸರ, ಕಲೆ-ಮುಂತಾದ ಕ್ಷೇತ್ರಗಳಲ್ಲಿ ನಡೆಯುವ ಚರ್ಚೆ-ಶೋಧಗಳು ಇಲ್ಲಿ ಪ್ರಕಟವಾಗುತ್ತವೆ. 'ಕನ್ನಡ ಅಧ್ಯಯನ'ವು ಏಕಕಾಲಕ್ಕೆ ನಾಡಿನ ಗತದ ತಡಕಾಟವನ್ನು, ವರ್ತಮಾನದ ಮುಖಾಮುಖಿಯನ್ನು ಹಾಗೂ ಭವಿಷ್ಯದ ಕನಸು ಕಟ್ಟುವಿಕೆಯನ್ನು ಮಾಡಬಯಸುತ್ತದೆ. ಈ ಮೂಲಕ ವಿದ್ವಾಂಸರಿಗೆ ಸಾಂಸ್ಕೃತಿಕ ವೇದಿಕೆಯಂತೆಯೂ, ಓದುಗರಿಗೆ ಬೌದ್ಧಿಕ ಸಂಗಾತಿಯಂತೆಯೂ ಕೆಲಸ ಬೇಕೆಂಬುದು ಇದರ ಹಂಬಲ.

'ಕನ್ನಡ ಅಧ್ಯಯನ'ವು ಸೊಲ್ಲು, ಲೇಖನ, ಹಿಂದಣ ಹೆಜ್ಜೆ, ಕನ್ನಡಿ, ಎಲೆಮರೆ, ಮುಖಾಮುಖಿ, ಹೊಳಹು, ಪುಸ್ತಕ ಪರಿಚಯ, ಆಕರ ಸೂಚಿ -ಮುಂತಾದ ವಿಭಾಗಗಳಲ್ಲಿ ಬರಹಗಳನ್ನು ಒಳಗೊಂಡಿರುತ್ತದೆ. ಪತ್ರಿಕೆಯ ಪ್ರತಿ ಸಂಪುಟದಲ್ಲಿ ಮಳೆ, ಚಳಿ, ಗಾಳಿ, ಬಿಸಿಲು ಎಂಬ ಹೆಸರಿನ ನಾಲ್ಕು ಸಂಚಿಕೆಗಳು ಇರುತ್ತವೆ.

Reg. No. 05999/23/AL/93/TL